ಲ್ಯಾಸಿಯಮ್ ಗ್ರಂಥಮಾಲೆಯ ಪ್ರಥಮ ಕುಸುಮ

# ಗೋಳಿನ ಬಾಳು

ಲೇಖಕ:

ಪಿ. ದಯಾನಂದ ನಾಯಕ್, ಬಿ. ಎ., ಎಲ್. ಎಲ್. ಬಿ.



ಮನೋಹರ ಗ್ರಂಥಭಾಂಡಾರ

ಧಾರವಾಡ.

ಎಪ್ರಿಲ್ ೧೯೪೧

ಬೆಲೆ: ಆರಾಣೆ.

# ಅರ್ಪಣೆ

ಸಮಾಜದ ಅಗ್ನಿಕುಂಡದಲ್ಲಿ
ಬೆಂದು, ನೊಂದು, ಕಂದಿ, ಕುಂದಿ,
ಕಂಬನಿಗರೆಯುತ್ತ ಕಾಲ ಕಳೆವ
ಬಾಲವಿಧವೆಯರಿಗೆ ಅಭಯವಿತ್ತು
ವಿಧವಾವಿವಾಹಕ್ಕಾಗಿ ನಿರಂತರ ದುಡಿಯುತ್ತಿರುವ
ಸಿರ್ಸಿಯ ಶ್ರೀ ಅಕದಾಸ ಗಣಪತಿಭಟ್ಟರ
ಚರಣಾರವಿಂದದೆಡೆಯಲ್ಲಿ.

# ಬಿನ್ನಹ

ಈ ಕಾದಂಬರಿಯು ಯಾರನ್ನು ಉದ್ದೇಶಿಸಿಯೂ ಬರೆದುದಲ್ಲ. ಇದರಲ್ಲಿ ಚಿತ್ರಿಸಲ್ಪಟ್ಟ ವ್ಯಕ್ತಿಗಳೂ ಸನ್ನಿವೇಶಗಳೂ ಕೇವಲ ಕಾಲ್ಪನಿಕ.

ಇದಕ್ಕೆ ಮುನ್ನುಡಿ ಬರೆದುಕೊಟ್ಟ ಶ್ರೀ ಕೊರಡ್ಕಲ್ ಶ್ರೀನಿವಾಸ ರಾಯರಿಗೂ, ನನಗೆ ಹಲವು ವಿಧದಿಂದ ನೆರವಾದ ನನ್ನ ಮಿತ್ರವೃಂದಕ್ಕೂ ನಾನು ಚಿರ ಋಣಿ. ವಿಶೇಷ ಶ್ರದ್ಧೆ ವಹಿಸಿ ಸುಂದರವಾಗಿ ಸಕಾಲಕ್ಕೆ ಮುದ್ರಿಸಿಕೊಟ್ಟ ಪ್ರಭಾಕರ ಪ್ರೆಸ್ ಲಿಮಿಟೆಡ್, ಉಡುಪಿ— ಇವರಿಗೂ, ಜಾಹೀರಾತುಗಳನ್ನು ಕೊಟ್ಟು ಸಹಕರಿಸಿದ ಮಹನೀಯರಿಗೂ ಲ್ಯಾಸಿಯವನ್ ಚಿರ ಋಣಿ.

ಉಡುಪಿ, ೬-೪-'೪೧
ರವಿವಾರ, ಶ್ರೀರಾಮನವಮಿ

ಪಿ. ದಯಾನಂದ ನಾಯಕ್

# ಲ್ಯಾಸಿಯಮ್

## ಉಡುಪಿ, ದ. ಭಾರತ




ನಿಂತವರು:- ೧ ಶ್ರೀ ಕೆ. ವೆಂಕಟೇಶ ಶೆಣೈ, ಬಿ. ಎಸ್‌ಸಿ. ೨ ಶ್ರೀ ಪಿ. ದಯಾನಂದ ನಾಯಕ್, ಬಿ. ಎ., ಎಲ್‌ಎಲ್. ಬಿ. ೩ ಶ್ರೀ ಯು. ಶ್ರೀಪತಿರಾವ್.

ಕುಳಿತವರು:- ೧ ಶ್ರೀ ಬನ್ನಂಜೆ ರಾಮಾಚಾರ್ಯ. ೨ ಶ್ರೀ ಎ. ರಾಮಣ್ಣ ಶೆಟ್ಟಿ, ಬಿ. ಎ., ಎಲ್. ಟಿ. ೩ ಶ್ರೀ ಯು. ವಾಸುದೇವ ಪ್ರಭು, ಬಿ. ಎ., ಬಿ. ಟಿ. ೪ ಶ್ರೀ ಕೊರಡ್ಕಲ್ ಶ್ರೀನಿವಾಸರಾವ್. ೫ ಶ್ರೀ ಎನ್. ವಿ. ಕಾಮತ್, ಬಿ. ಎ., ಬಿ. ಎಲ್.

# ಮುನ್ನುಡಿ

ಕನ್ನಡದಲ್ಲಿ ಸ್ವತಂತ್ರವಾಗಿ ಬರೆದ ಕಾದಂಬರಿಗಳು ಸಾಕಷ್ಟು ಇಲ್ಲದಿರುವಲ್ಲಿ ಎಲ್ಲಾದರೂ ಅಲ್ಲೊಂದು ಇಲ್ಲೊಂದು ಹೊಸದಾಗಿ ಕಣ್ಣಿಗೆ ಬಿತ್ತೆಂದರೆ ತುಂಬ ಸಂತೋಷವಾಗುವುದು ಸಹಜ. ಹಸ್ತಾಕ್ಷರ ಪ್ರತಿಯಲ್ಲಿ ಇದು ನನ್ನ ಕೈಗೆ ಬಂದಾಗ ಹಾಗಾಯಿತು ನನಗೆ. ತೆಗೆದೋದಿದೆ. ಮನಸ್ಸನ್ನು ಸೆಳೆದೊಯ್ಯಿತ್ತು ಮುಂದುವರಿಯಿತು ಕಥಾಭಾಗ ನಿರೂಪಣೆಯ ರೀತಿಯು ಸಮಾಜವನ್ನು ಕಣ್ಣೆದುರು ತಂದು ನಿಲ್ಲಿಸಿತು; ಅಂತಃಕರಣವನ್ನು ಮುಟ್ಟಿ ತಟ್ಟಿ ಎಬ್ಬಿಸುವಂತಹ ಸುಖದುಃಖಗಳ ಆಶೆನಿರಾಶೆಗಳ ಸನ್ನಿವೇಶಗಳನ್ನು ತೋರಿಸಿತು; ಸುಂದರ ಭಾವನೆಗಳಿಂದ ರಸಿಕತೆಯ ಮಾತುಗಳಿಂದ ಆನಂದಗೊಳಿಸಿತು. ಬರೆದವ ರ್ಯಾರೆಂದು ಗೊತ್ತಿದ್ದಿಲ್ಲ. ಯಾರೇ ಇರಲಿ, ಅವರಲ್ಲಿ ಮುಂದೆ ಗಣನೀಯ ಕಾದಂಬರಿಕಾರರಾಗುವ ಲಕ್ಷಣಗಳಿವೆ ಎಂದು ಹಿಗ್ಗಿದೆ. ಹಾಗೆಯೆ ಹೇಳಿದೆ ಆ ಮೇಲೆಯೆ ಇದು ಪ್ರಸಿದ್ಧ ಪ್ರಾಚೀನ ಮನೆತನಕ್ಕೆ ಸೇರಿದ ಶ್ರೀಮಂತ ಕುಮಾರರೂ ವಿಶ್ವವಿದ್ಯಾಲಯಗಳೆರಡರ ಪದವೀಧರರೂ ಹರೆಯದ ಉತ್ಸಾಹಿ ಗಳೂ ಆಗಿರುವ ಶ್ರೀ ಪಾಂಗಾಳ ದಯಾನಂದ ನಾಯಕರ ಮೊದಲ ಪ್ರಯತ್ನ ವೆಂದು ತಿಳಿದುಬಂತು. ಅತಿಶಯ ಆನಂದವಾಯಿತು. ಇಂದು ಕನ್ನಡಮ್ಮನ ಸೇವೆಗೆ ಅನಿವಾರ್ಯವಾಗಿ ಬೇಕಾದವರು, ಅವಶ್ಯ ಕೈಗೊಡಬೇಕಾದವರು ಅಂತಹರೇ. ಹಳೆಯದೆಲ್ಲ ಹೊನ್ನು ಹೊಸದೆಲ್ಲ ಮಣ್ಣು ಎಂಬ ಸಂಪ್ರದಾಯ ಶರಣರಿಂದಾಗಲಿ, ಇಂದಿನದೆಲ್ಲ ರಸ ಹಿಂದಿನದೆಲ್ಲ ಕಸ ಎನ್ನುವ ಅತ್ಯಾಧುನಿಕ ರಿಂದಾಗಲಿ ಜನಪ್ರಿಯ ಸಾಹಿತ್ಯ ನಿರ್ಮಾಣವಾಗದು. ನಿರಾಗ್ರಹ ದೃಷ್ಟಿಯಿಂದ ಎರಡನ್ನೂ ನೋಡಿ ಶೋಧಿಸಿ ಗುಣಗ್ರಹಣ ಮಾಡಿ ಇಂದಿಗೆ ಸರಿಹೋಗುವುದನ್ನು ನಾಳೆಗೆ ಹಾದಿಯಾಗುವುದನ್ನು ಬಾಳನ್ನು ತಿಕ್ಕಿ ತಿದ್ದಿ ಬೆಳಗಿಸಬಲ್ಲುದನ್ನು ಆಯ್ದುಕೊಂಡು ರೂಪಗೊಟ್ಟು ಕನ್ನಡ ವಾಗ್ದೇವಿಯ ಭಂಡಾರಕ್ಕೊಪ್ಪಿಸುವಷ್ಟು ವಿಚಾರ, ವಿವೇಕ, ವಿದ್ಯೆ, ಬುದ್ಧಿ, ಲೇಖನ-ಚಾತುರ್ಯ, ಪ್ರತಿಭೆ ಇವೆಲ್ಲ ಬೇಕು

ಅಂತಹ ಸಾಹಿತ್ಯರಚನೆಗೆ. ಮೇಲಾಗಿ ತಾಪತ್ರಯಗಳ ಉರಿಯಿಂದ ಮನೋರಾಜ್ಯದ ಅರಳುಗಳು ಕಮರಿ ಸೀಕರಿಯದಷ್ಟು ಸಿರಿತನವು ಬೇಕು; ಕನ್ನಡದ ಸೇವೆಗಿಳಿಯುವ ಅಂತಃಪ್ರೇರಣೆ ಸಿದ್ಧಾಂತಗಳಂತೂ ಬೇಕೇ ಬೇಕು. ಈ ಲಕ್ಷಣಗಳೆಲ್ಲ ಏಕತ್ರ ತೋರುವುದು ವಿರಳ. ಆದರೆ ಶ್ರೀ ನಾಯಕರಲ್ಲಿ ಇವೆಲ್ಲ ಸಮ್ಮಿಳಿತವಾಗಿವೆ. ಅದು ಕಾರಣ ಕನ್ನಡ ನುಡಿಯ ಸೇವೆಯಲ್ಲಿ ಬದ್ಧಕಂಕಣರಾದ ಇವರನ್ನು ಪರಮಾನಂದದಿಂದ ಅಭಿನಂದಿಸುತ್ತೇನೆ. ಇವರ ಈ ಮನೋಹರ ಕಾದಂಬರಿಗೆ ಸುಸ್ವಾಗತವನ್ನಿಯುತ್ತೇನೆ. ಓದುಗರ ನೆರವು ಗೆಳೆಯರ ಹುರುಪು ಸಾಹಿತಿಗಳ ಆದರದ ಸೈಪು ಶ್ರೀ. ನಾಯಕರ ಲೇಖನಿಗೆ ಉತ್ಸಾಹವನ್ನೀಯಲಿ! ಇನ್ನೂ ಒಳ್ಳೊಳ್ಳೆಯ ಗ್ರಂಥಗಳನ್ನದು ಬರೆಯುವಂತಾಗಲಿ!

(ಇವರ ಪ್ರಕಾಶನವನ್ನು 'ಲ್ಯಾಸಿಯಮ್' ಕೈಗೊಂಡಿದೆ. 'ಲ್ಯಾಸಿಯಮ್! ಎಂತಹ ವಿಚಿತ್ರ ಶಬ್ದ!' ಎಂದು ಹಲವರಿಗೆ ತೋರಬಹುದು. ಅದು ಕಾರಣ ಈ ಮುನ್ನುಡಿಯ ಹಿನ್ನುಡಿಯಾಗಿ ಅದನ್ನು ಕುರಿತು ಒಂದೆರಡು ಬಿಡುನುಡಿಗಳು. ಸುಮಾರು ೨೩ ಶತಮಾನಗಳ ಹಿಂದೆ ಗ್ರೀಕದೇಶದ ಮಹಾವಿದ್ವಾಂಸನೂ ತತ್ತ್ವಶಾಸ್ತ್ರವೇತ್ತನೂ ಆಗಿದ್ದ ಎರಿಸ್ಟೋಟಲನು ವಿಚಾರ ಪ್ರಚೋದಕವಾದ ತನ್ನ ಬೋಧನೆಯನ್ನೀಯುತ್ತಿದ್ದ ಉದ್ಯಾನವೇದಿಕೆಯ ಹೆಸರು ಲ್ಯಾಸಿಯಮ್. ಇಂದಿನದು ವಿಚಾರ ಯುಗವಲ್ಲವೆ? ಅದರ ವಾತಾವರಣದಲ್ಲಿ ನಾಳಿನ ಧುರೀಣರಾದ ಇಂದಿನ ತರುಣರು ಅಣಿಯಾಗಬೇಡವೇ? ಅದಕ್ಕಾಗಿ ಉಡುಪಿಯ ಯುವಜನರು ಏರ್ಪಡಿಸಿಕೊಂಡ ಸಂಸ್ಥೆಗೆ 'ಲ್ಯಾಸಿಯಮ್' ಎಂದು ಹೆಸರಿಟ್ಟುಕೊಂಡುದರಲ್ಲಿ ಔಚಿತ್ಯವಿದೆ. 'ಲ್ಯಾಸಿಯಮ್' ನಾಲ್ಕು ತಿಂಗಳ ತೊಟ್ಟಿಲ ಮಗು. ಈಗಾಗಲೆ ಉಡುಪಿಯ ಹಿರಿಯ ಕಿರಿಯರೆನ್ನದೆಲ್ಲರ ಮುದ್ದಿನ ಮಗುವಾಗಿ ಬಿಟ್ಟಿದೆ. ಆಗಾಗ ಅದರ ಬಾಲಲೀಲೆಯನ್ನು ನೋಡಲು ನೂರಾರು ಮಂದಿ ಕೂಡಿ ಬರುತ್ತಾರೆ. ಬೆಳೆಯ ಸಿರಿ ಮೊಳೆಯಲ್ಲೇ ತೋರಿಬರುತ್ತಿದೆ ಎಂದು ಸಂತಸಗೊಳ್ಳುತ್ತಾರೆ. ನಮ್ಮ ಸಾಹಿತ್ಯ ಸಂಸ್ಕೃತಿಗಳ ಸಂವರ್ಧನೆಗಾಗಿ ಕನ್ನಡವು ಬೇಕು, ವಿಶ್ವವಾಙ್ಮಯದ ತಿರುಳು ಹುರುಳನ್ನರಿಯಲು ಇಂಗ್ಲೀಷು ಬೇಕು, ಪ್ರಾಂತ ಪ್ರಾಂತಗಳೊಳಗಿನ ವ್ಯವಹಾರ ನಿರ್ವಾಹಕ್ಕೆ ಹಿಂದೀ ಬೇಕು ಅದು ಕಾರಣ ಇವುಗಳಲ್ಲಿ ವಾಙ್ಮಿಗಳಾದವರಿಗೆ ಆಗಲು ಅಭ್ಯಸಿಸುವವರಿಗೆ

ವಿಚಾರ ಪ್ರಚಾರ ಮಾಡುವವರಿಗೆ ಏಕವೇದಿಕೆಯನ್ನು ಕಲ್ಪಿಸಿಕೊಟ್ಟು ಯುಗಧರ್ಮಕ್ಕೊಪ್ಪುವಂತೆ ಜನತೆಯ ಮನೋವೃತ್ತಿಯನ್ನು ತಿದ್ದುವುದು ಲ್ಯಾಸಿಯಮಿನ ಪ್ರಧಾನ ಧ್ಯೇಯ. ತನ್ನ ಸದಸ್ಯರಲ್ಲಿ ಸುಪ್ತವಾಗಿರುವ ಸಂಗೀತ ಸಾಹಿತ್ಯ ನಾಟಕಾಭಿನಯಾದಿ ಲಲಿತ ಕಲೆಗಳು ವಿಕಾಸಗೊಳ್ಳುವಂತೆ ಅವಕಾಶವೀಯುವುದು ಮತ್ತೊಂದು ಧ್ಯೇಯ. ಎಲ್ಲಕ್ಕೂ ಮೇಲಾಗಿ, ಜಾತಿಮತ ಪಂಥ ಪಂಗಡಗಳೆಂಬ ಮಲಿನ ಮನೋವೃತ್ತಿಯನ್ನು ತೊರೆದು ಸರ್ವ ಸಮಾನತೆ—ಸರ್ವಸೋದರತೆಯ ವಾತಾವರಣದಲ್ಲಿ ಕೂಡಿಯಾಡಿ ನುಡಿದುನಡೆದು ಬೆಳೆದು ಬಾಳಿ ನಾವೆಲ್ಲ ಒಂದೇ ಜನಾಂಗವೆಂಬ ದೃಢಚಿತ್ತದಿಂದ ಒಂದೇ ಹೃದಯದಿಂದ ಒಂದೇ ಕಂಠದಿಂದ 'ವಂದೇ ಮಾತರಂ' ಎನ್ನುವಷ್ಟು ವಿಚಾರವೈಶಾಲ್ಯವನ್ನುಂಟುಮಾಡಬೇಕೆಂಬುದು ಲ್ಯಾಸಿಯಮಿನ ಹಿರಿಯ ಹಂಬಲ. ಅದು ಕೈಗೂಡಿಬರುವಂತೆ ಜನತಾಜನಾರ್ದನನು ಪ್ರೋತ್ಸಾಹಿಸಲಿ, ಬೆಂಬಲವೀಯಲಿ, ಆಶೀರ್ವದಿಸಲಿ!

ಕಾವ್ಯಕಲಾಮಂದಿರ,
ಉಡುಪಿ.
1—4—1941

ಕೊರಡ್ಕಲ್ ಶ್ರೀನಿವಾಸ ರಾವ್.



# ಲ್ಯಾಸಿಯುಮ್ ಎಂದರೇನು?

## ಅದರ ಆಶಾಕಾಂಕ್ಷೆ ಧ್ಯೇಯೋದ್ದೇಶಗಳಾವುವು?

**ಲ್ಯಾಸಿಯುಮ್**- ಅದೊಂದು ಸಾಹಿತ್ಯ-ಸಂಸ್ಕೃತಿ ಸಂವರ್ಧಕ ಸಂಘ; ಅದು ಜನತೆಯ ಹೃದಯ ಬುದ್ಧಿ ವಿಕಾಸ ವಿಚಾರಗಳ ಪ್ರಗತಿಗಾಗಿ ದುಡಿಯುತ್ತದೆ.

**ಲ್ಯಾಸಿಯುಮ್**- ವ್ಯಕ್ತಿಯ ಮನೋಗತವನ್ನು ಲೇಖನ ಭಾಷಣಗಳ ಮೂಲಕ ವ್ಯಕ್ತಗೊಳಿಸುವ ಕಲೆಯನ್ನು ವೃದ್ಧಿಗೊಳಿಸಲು ಪ್ರಯತ್ನಿಸುತ್ತದೆ.

**ಲ್ಯಾಸಿಯುಮ್**- ಇಂಗ್ಲಿಷ್, ಕನ್ನಡ, ಹಿಂದೂಸ್ಥಾನಿ ಭಾಷೆಗಳ ವಾಗ್ಮಿಗಳಿಗೆ ವಕ್ತೃತ್ವ ಅಭ್ಯಾಸಿಗಳಿಗೆ ಏಕವೇದಿಕೆಯನ್ನು ಕಲ್ಪಿಸಿ ಕೊಡುತ್ತದೆ.

**ಲ್ಯಾಸಿಯುಮ್**- ತನ್ನ ಸದಸ್ಯರಲ್ಲಿ ಲೇಖನಕಲೆಯನ್ನು ಉತ್ತೇಜಿಸುವುದಕ್ಕಾಗಿ 'ಲ್ಯಾಸಿಯುಮ್ ಟ್ಯಾವರ್ಸ್' ಎಂಬ ಹಸ್ತಲಿಖಿತ ಮಾಸಪತ್ರಿಕೆಯನ್ನು ನಡೆಯಿಸುತ್ತದೆ.

**ಲ್ಯಾಸಿಯುಮ್**- ತನ್ನ ಧ್ಯೇಯಾಶಯಗಳಿಗೊಪ್ಪುವ ವಿಷಯಗಳನ್ನೆತ್ತಿ ಬರೆದ ಇಂಗ್ಲಿಷ್, ಕನ್ನಡ, ಹಿಂದೂಸ್ಥಾನಿ ಗ್ರಂಥಗಳ ಪ್ರಕಟಣೆಯ ಕಾರ್ಯವನ್ನು ಕೈಗೊಳ್ಳುತ್ತದೆ.

**ಲ್ಯಾಸಿಯುಮ್**- ತನ್ನ ಸದಸ್ಯರಲ್ಲಿ ಸುಪ್ತನಾಗಿರುವ ನಟನಾಚಾತುರ್ಯವನ್ನು ವೃದ್ಧಿಗೊಳಿಸಲು ನಾಟಕಗಳನ್ನು ಆಡುತ್ತದೆ

**ಲ್ಯಾಸಿಯುಮ್**- ಬೌದ್ಧಿಕ ಸಾಹಿತ್ಯಿಕ ಸಾಂಸ್ಕೃತಿಕ ವಿಚಾರ ಪ್ರಚಾರಗಳಲ್ಲಿ ಭಾಗವಹಿಸಬೇಕೆಂಬ ಸದಿಚ್ಛೆಯುಳ್ಳವರನ್ನು ಮುಕ್ತದ್ವಾರದಿಂದ ಸ್ವಾಗತಿಸುತ್ತದೆ.

**ಲ್ಯಾಸಿಯುಮ್**- ತನ್ನ ಸದಸ್ಯರಿಂದ ವರ್ಗಣಿಯನ್ನು ಕೇಳುವುದಿಲ್ಲ.

# ಗೋಳಿನ ಬಾಳು

## ೧

ಡಾಕ್ಟರರು ಬಂದಿರಲಿಲ್ಲ. ರೋಗಿಗಳೂ ರೋಗಿಗಳ ಸಂಬಂಧಿಕರೂ ಡಾಕ್ಟರರ ಆಗಮನವನ್ನು ಕಾಯುತ್ತ ಕುಳಿತಿದ್ದರು. "ಡಾಕ್ಟರರು ಬರಲು ಇನ್ನೆಷ್ಟು ತಡವಿದೆ?" ಎಂದು ಕೇಳಿದವರಿಗೆಲ್ಲ "ಈಗಲೆ ಬಂದಾರು; ಇಷ್ಟರೊಳಗೆ ಬರಬೇಕಾಗಿತ್ತು; ಅಗತ್ಯದ 'ಕೇಸೇ'ನಾದರೂ ಬಂದು, ಮನೆಯಿಂದಲೆ ಎಲ್ಲಿಗಾದರೂ ಹೋಗಿರಬಹುದು. ಸ್ವಲ್ಪ ಕುಳಿತುಕೊಳ್ಳಿರಿ" ಎಂದು ಉತ್ತರವಿತ್ತು 'ಕಂಪೌಂಡರ'ರಿಗೆ ಸಾಕುಸಾಕಾಯಿತು.

ಇಷ್ಟರಲ್ಲಿ ಹೆಂಗಸೊಬ್ಬಳು ಬೇಗಬೇಗನೆ ಬಂದು ದವಾಖಾನೆಯನ್ನು ಹೊಕ್ಕು "ಡಾಕ್ಟರರಿರುವರೇ?" ಎಂದು ಕೇಳಿದಳು. ಅವಳ ಕೂದಲು ಅಸ್ತವ್ಯಸ್ತವಾಗಿತ್ತು. ಸೆರಗು ಅವ್ಯವಸ್ಥಿತವಾಗಿತ್ತು. ಹಣೆಯಲ್ಲಿ ಕುಂಕುಮವಿದ್ದಿಲ್ಲ. ಗಾಬರಿಯಿಂದ ಮನೆಯುಡಿಗೆಯಲ್ಲಿ ಓಡಿ ಬಂದಂತಿದ್ದಳವಳು. ಕಂಪೌಂಡರರು ವಾಡಿಕೆಯ ಉತ್ತರವನ್ನೀಯಲು, ಅವಳು ನಿಟ್ಟುಸಿರಿಟ್ಟು, ಕುಳಿತುಕೊಂಡಳು. ಮತ್ತೆದ್ದು ಹೊರಗೆ ಹೋಗಿ ಡಾಕ್ಟರರು ದೂರದಿಂದ ಬರುವರೇನೊ ಎಂದು ನೋಡಿ, ನಿರಾಶಳಾಗಿ ಒಳಗೆ ಬಂದು, ಒಂದು ಗಳಿಗೆ ಕುಳಿತುಕೊಂಡಳು. ತಿರುಗಿ ಹೊರಗೆ ಹೋಗಿ ನೋಡಿದಳು. ಈ ರೀತಿ ಉತ್ಕಂಠಿತೆಯಾಗಿ ಅವಳು ಮೂರುನಾಲ್ಕು ಸಾರೆ ಹೊರಗೂ ಒಳಗೂ ಸುಳಿದಾಡಿದಳು.

ಅವಳ ಈ ವಿಚಿತ್ರವರ್ತನೆಯನ್ನೂ ಮ್ಲಾನವದನವನ್ನೂ ನೋಡಿದ ಯುವಕನೊಬ್ಬನು ತನ್ನ ಆಸನದಿಂದೆದ್ದು ಅವಳ ಬಳಿಗೆ ಹೋಗಿ, "ಅಮ್ಮಾ, ನೀವು ಡಾಕ್ಟರರನ್ನು ಕಾಣಲು ಬಹಳ ಕಾತರರಾಗಿರುವಂತೆ ತೋರುತ್ತದೆ.

ನಿಮ್ಮಲ್ಲಿ ಯಾರಿಗಾದರೂ ಕಾಯಿಲೆ ವಿಶೇಷವಿದೆಯೆ?" ಎಂದು ಕನಿಕರ ಪೂರ್ವಕವಾಗಿ ಕೇಳಿದನು.

ಈ ಮಾತನ್ನು ಕೇಳುತ್ತಲೆ ಆ ಸ್ತ್ರೀಯು ತನ್ನ ದುಃಖವನ್ನು ತಡೆದು ಕೊಳ್ಳಲಾರದೆ, ಬಿಕ್ಕಿ ಬಿಕ್ಕಿ ಅಳುತ್ತ, "ತಮ್ಮಾ, ನನ್ನ ಮಗಳಿಗೆ ಕೆಲವು ದಿನಗಳಿಂದ ಜ್ವರ ಬರುತ್ತಿದೆ. ನಾನು ನಿತ್ಯವೂ ಮದ್ದನ್ನು ಇಲ್ಲಿಂದ ತೆಗೆದು ಕೊಂಡು ಹೋಗುತ್ತೇನೆ. ಈಗ ಅವಳ ಜ್ವರವು ಒಮ್ಮೆಲೆ ಏರಿದೆ. ಅಲ್ಲಿ ಆರೈಕೆ ನೋಡುವವರು ಬೇರೆ ಯಾರೂ ಇಲ್ಲ. ಡಾಕ್ಟರರನ್ನು ಕರೆದು ಕೊಂಡು ಹೋಗಬೇಕೆಂದು ಓಡ್ಯೋಡಿ ಬಂದೆನು. ಆದರೆ ಅವರಿಲ್ಲಿಲ್ಲ. ಇನ್ನೆಷ್ಟು ಹೊತ್ತಿಗೆ ಬರುವರೊ? ಆ ತನಕ ಅವಳನ್ನು ಬಿಟ್ಟು ನಾನಿಲ್ಲಿ ಹೇಗಿರಲಿ? ಈಗೇನು ಮಾಡಲಿ?" ಎಂದು ಹೇಳುತ್ತ, ಉಕ್ಕಿ ಬರುತ್ತಿದ್ದ ಕಂಬನಿಯನ್ನು ಸೀರೆಯ ಸೆರಗಿನಿಂದೊರೆಸತೊಡಗಿದಳು.

ಆ ಯುವಕನು "ಅಮ್ಮಾ, ನೀವು ಮನೆಗೆ ಹೋಗಿ. ಡಾಕ್ಟರರು ಬಂದೊಡನೆ ಅವರನ್ನು ಕರೆದುಕೊಂಡು ನಿಮ್ಮಲ್ಲಿಗೆ ಬರುವೆನು. ನಿಮ್ಮ ಮನೆ ಎಲ್ಲೆಂಬುದನ್ನು ಮಾತ್ರ ತಿಳಿಸಿ ಹೋಗಿ" ಎಂದನು.

ಅವಳು ಗದ್ಗದ ಕಂಠದಿಂದ "ತಮ್ಮಾ, ಭಗವಂತನು ನಿನಗೆ ಸಕಲ ಶ್ರೇಯಸ್ಸನ್ನೂ ಕರುಣಿಸಲಿ! ನೀನೆಲ್ಲೊ ನನ್ನ ಪೂರ್ವಜನ್ಮದ ಪುತ್ರ ನಾಗಿರಬೇಕು; ಇಲ್ಲವಾದರೆ ಇಂತಹ ಕಷ್ಟಕಾಲದಲ್ಲಿ ನೀನು ನಮಗೆ ನೆರವಾಗುತಿದ್ದಿಲ್ಲ. ಸಿರಿಬೀಡಿನಿಂದ ಮಲ್ಪೆಗೆ ಹೋಗುವ ರಸ್ತೆಯಲ್ಲಿ ಸಾಹುಕಾರ್ ವೆಂಕಟ್ರಾಯರ ಉಪ್ಪರಿಗೆಯ ಹೊಸಮನೆಯಿದೆ ಗೊತ್ತಿ ದೆಯೆ? ಅದರ ಇದಿರಲ್ಲೆ ಇರುವ ಮುಳಿಮಾಡಿನ ಸಣ್ಣ ಗುಡಿಸಲು ನನ್ನದು. ಡಾಕ್ಟರರನ್ನು ಬೇಗನೆ ಕರೆದುಕೊಂಡು ಬಾ. ಇಷ್ಟು ಹೊತ್ತಿಗೆ ನನ್ನ ಮಗಳ ಸ್ಥಿತಿ ಏನಾಗಿದೆಯೆಂದು ಆ ಪರಮಾತ್ಮನೊಬ್ಬನೆ ಬಲ್ಲ!" ಎಂದು ಹೇಳುತ್ತ ಮನೆಕಡೆ ಧಾವಿಸಿದಳು.

ಡಾಕ್ಟರರು ಬಂದ ಕೂಡಲೆ ಆ ಯುವಕನು ಅವರನ್ನು ಕರೆದು ಕೊಂಡು ಹೋದನು. ಆ ವಿಧವೆಗೆ ಬೇರೆ ಯಾವ ಜನಸಹಾಯವೂ

ಇಲ್ಲದಿದ್ದುದರಿಂದ ಅವನು ನಿತ್ಯವೂ ಬೆಳಗೂ ಬೈಗೂ ಅವಳ ಮನೆಗೆ ಹೋಗಿ, ಅವಳನ್ನು ಧೈರ್ಯಗೊಳಿಸಿ, ದವಾಖಾನೆಯಿಂದ ಮದ್ದನ್ನು ತಂದು ಕೊಟ್ಟು, ರೋಗಿಯ ಶುಶ್ರೂಷೆಯಲ್ಲಿ ಇನ್ನೂ ಹಲವು ವಿಧದಿಂದ ನೆರವಾದನು.

ರೋಗಿಯು ಕ್ರಮೇಣ ಆರೋಗ್ಯಲಾಭವನ್ನು ಹೊಂದಲು ಆ ವಿಧವೆಯ ಸಂತೋಷಕ್ಕೆ ಪಾರವಿಲ್ಲವಾಯಿತು. ಆ ಯುವಕನನ್ನು ಆಕೆಯು ಹೊಗಳುವುದಕ್ಕೂ ಮಿತಿಯೆ ಇರಲಿಲ್ಲ.

---

## ೨

ಚಂದ್ರಭಾಗಮ್ಮನು ವಿಧವೆಯಾಗಿ ಮೂರು ನಾಲ್ಕು ವರ್ಷವಾಗಿತ್ತು. ಅವಳ ಗಂಡನು ವಕೀಲರ ಗುಮಾಸ್ತನಾಗಿದ್ದನು. ಅವನ ಸಂಪಾದನೆಯು ಅಶನವಸನಕ್ಕೆ ಸಾಕಾಗುತಿದ್ದಿತು. ಆದುದರಿಂದ ಅವರಿಂದ ಏನನ್ನೂ ಉಳಿಸಲಾಗುತ್ತಿರಲಿಲ್ಲ. ಅವನು ಸತ್ತಾಗ ಅವನ ಎರಡು ಸಾವಿರದ 'ಇನ್ಶೂರೆನ್ಸ್ ಪೊಲಿಸಿ' ಮತ್ತು ವಾಸ್ತವ್ಯದ ಮನೆ ವಿನಾ ಬೇರೇನೂ ಉಳಿದಿರಲಿಲ್ಲ. ಅವನು ಆ ಪೊಲಿಸಿಯನ್ನು ಕಳೆದುಕೊಳ್ಳುವುದರಲ್ಲಿದ್ದಾಗ, ಚಂದ್ರಭಾಗಮ್ಮನು ದೂರಾಲೋಚನೆಯಿಂದ ಆಭರಣಗಳನ್ನು ಮಾರಿ 'ಪ್ರೀಮಿಯಮು'ನ್ನು ಕಟ್ಟಿ, ಪೊಲಿಸಿಯನ್ನು ಊರ್ಜಿತವಾಗಿರಿಸಿದುದರಿಂದಲೆ ಇಂದಿನ ಆಪತ್ತಿನಲ್ಲಿ ಅವಳಿಗೆ ಈ ಸಂಪತ್ತು ಸಿಕ್ಕಿತ್ತು. ಈ ಧನದ ಆಧಾರದಿಂದ ಅವಳು ತನ್ನ ಇಬ್ಬರು ಹುಡುಗಿಯರ ವಿದ್ಯಾಭ್ಯಾಸವನ್ನೂ ತಮ್ಮೆಲ್ಲರ ಹೊಟ್ಟೆಬಟ್ಟೆಯ ವೆಚ್ಚವನ್ನೂ ನೋಡಿಕೊಂಡು, ಬಹಳ ಜಾಗರೂಕತೆಯಿಂದಿದ್ದಳು.

ಹಿರಿಯ ಮಗಳು ಸೀತೆ. ಪತಿವ್ರತಾಶಿರೋಮಣಿಯ ಹೆಸರನ್ನು ಹೊತ್ತಿದ್ದರೂ, ಸೀತೆಯು ಮದುವೆಯಾದ ವರ್ಷದಲ್ಲೆ ಗಂಡನನ್ನು ಕಳೆದುಕೊಂಡು ತವರುಮನೆಗೆ ಹಿಂದಿರುಗಿದ್ದಳು. ಪ್ರಾಯವು ಸುಮಾರು

ಇಪ್ಪತ್ತು. ನೋಡಲಿಕ್ಕೆ ಸುಂದರಿಯೂ ಅಹುದು. ಗುಣದಲ್ಲಿಯೂ ತನ್ನ ಹೆಸರಿನ ತ್ರೇತಾಯುಗದ ಭಗಿನಿಗೆ ಸರಿಮಿಗಿಲು. ಆದರೆ ವಿಧಿಯು ಅವಳ ಹಣೆಯಲ್ಲಿ ಸೌಭಾಗ್ಯವನ್ನು ಬರೆಯದಿದ್ದುದರಿಂದ ಪತಿಸೌಖ್ಯದಿಂದ ವಂಚಿತ ಳಾಗಿ, ಪತಿಗೃಹದಿಂದ ಹೊರಟು ಬಂದು, ತಡೆಯಲ್ಪಟ್ಟ ವಿದ್ಯಾಭ್ಯಾಸವನ್ನು ಪುನರಾರಂಭಿಸಿ, ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಒಂದು ವರ್ಷ ಉಪಾಧ್ಯಾಯಿನಿಯಾಗಿದ್ದುಕೊಂಡು, ತರಬೇತಿಗಾಗಿ ಮಂಗಳೂರಿಗೆ ಹೋಗಿದ್ದಳು.

ಕಿರಿಯ ಮಗಳು ಲೀಲೆ. ಸೌಂದರ್ಯದಲ್ಲಿ ಲೀಲೆಯು ಸೀತೆಯನ್ನು ಮೀರಿದ್ದಳು. ಆಕೆಯು ಮುಗ್ಧಾವಸ್ಥೆಯಿಂದ ಮಧ್ಯಮಾವಸ್ಥೆಗೆ ಕಾಲಿ-ಟ್ಟಿದ್ದು, ಅರೆಬಿರಿದ ಮುಗುಳಿನಂತೆ ನಯನಮನೋಹರೆಯಾಗಿದ್ದಳು. ಕುಶಾಗ್ರಮತಿಯಾಗಿದ್ದುದರಿಂದ ತನ್ನ ಸಹಪಾಠಿಗಳನ್ನೆಲ್ಲಾ ಹಿಂದಿಕ್ಕಿ ಸರ್ವ ಪ್ರಥಮ ಸ್ಥಾನವನ್ನು ಹೊಂದಿ ವರ್ಷವರ್ಷವೂ 'ಇನಾಮು'ನ್ನು ಪಡೆಯು ತಿದ್ದಳು. ಈ ವರ್ಷ ಜ್ವರದಿಂದಾಗಿ ಒಂದೆರಡು ತಿಂಗಳು ಶಾಲೆಗೆ ಹೋಗಲಾಗದಿದ್ದುದರಿಂದ ಎಲ್ಲಿ ತಾನು ಪಾಠದಲ್ಲಿ ಹಿಂದೆ ಬೀಳುವೆನೊ, ಎಲ್ಲಿ ತನ್ನ ಸ್ಥಾನವನ್ನು ಇತರರು ಆಕ್ರಮಿಸಿ ತನ್ನ ಜನ್ಮಸಿದ್ಧ ಹಕ್ಕಿನಂತಿದ್ದ ಇನಾಮು ತನ್ನ ಕೈ ಬಿಟ್ಟುಹೋಗುವುದೊ ಎಂಬ ಯೋಚನೆಯು ಹಗಲಿರುಳೂ ಅವಳನ್ನು ಬಾಧಿಸುತಿತ್ತು.

ಚಂದ್ರಭಾಗಮ್ಮನನ್ನು ಅಂದು ದವಾಖಾನೆಯಲ್ಲಿ ಮಾತನಾಡಿಸಿ, ಲೀಲೆಯ ಕಾಯಿಲೆಯಲ್ಲಿ ಹಲವು ವಿಧದಿಂದ ನೆರವಾದ ಗೋವಿಂದ ಮಾಸ್ತರರು ಆಗಾಗ ಚಂದ್ರಭಾಗಮ್ಮನ ಮನೆಗೆ ಬರುತಿದ್ದರು. ಲೀಲೆಯು ಎಳ್ಳಷ್ಟೂ ಸಂಕೋಚವಿಲ್ಲದೆ ಕಷ್ಟ ಕಂಡ ಪಾಠಗಳನ್ನು ಅವರ ಸಹಾಯ ದಿಂದ ಕಲಿತುಕೊಳ್ಳುತಿದ್ದಳು. ಚಂದ್ರಭಾಗಮ್ಮನು ಗೋವಿಂದರಾಯ ರನ್ನು ಪುತ್ರವಾತ್ಸಲ್ಯದಿಂದ ಕಾಣುತಿದ್ದಳು.

ಒಂದು ದಿನ ಗೋವಿಂದ ಮಾಸ್ತರರು ಚಂದ್ರಭಾಗಮ್ಮನ ಮನೆಗೆ ಹೋದಾಗ, ಆಕೆಯು ಖಿನ್ನಮನಸ್ಕಳಾಗಿ ಕುಳಿತಿದ್ದಳು. ಲೀಲೆಯು

ಅಲ್ಲಿರಲಿಲ್ಲ. ಮಾಸ್ತರರು "ಅಮ್ಮಾ, ನೀವು ಬಹಳ ಯೋಚನೆಯಲ್ಲಿರುವಂತೆ ತೋರುವುದು. ಕಾರಣವನ್ನು ತಿಳಿಸಬಾರದೆ? ನನ್ನಿಂದ ನಿಮಗೆ ಯಾವ ಬಗೆಯ ಸಹಾಯವೂ ಆಗಬಹುದಾದರೆ ನಾನು ಸದಾ ಸಿದ್ಧನಿರುವೆನು" ಎಂದು ಅಂತಃಕರಣಪೂರ್ವಕವಾಗಿ ನುಡಿದರು.

"ತಮ್ಮಾ, ನಿನ್ನೊಡನೆ ಹೇಳಲಾಗದ ರಹಸ್ಯವೇನಿದೆ? ಅಂದು ಲೀಲೆಯು ಹಾಸಿಗೆ ಹಿಡಿದಿದ್ದಾಗ, ನಾನು ಕಂಗಾಲಾಗಿದ್ದಾಗ, ಆಗ ಅಪರಿಚಿತಳಾಗಿದ್ದ ನನ್ನನ್ನು ಮಾತನಾಡಿಸಿ, ಸಂತೈಸಿ, ನನ್ನ ಲೀಲೆಯನ್ನು ನನಗೆ ಪುನಃ ದೊರಕಿಸಿಕೊಟ್ಟ ನಿನ್ನುಪಕಾರವನ್ನು ನಾನು ಏಳು ಜನ್ಮದಲ್ಲಿಯೂ ಸಲ್ಲಿಸಲು ಅಸಮರ್ಥಳಾಗಿರುವಾಗ, ನನ್ನ ಕಷ್ಟವನ್ನು ಇನ್ನೂ ಇನ್ನೂ ತಿಳಿಸಿ, ನಿನಗೆ ವೃಥಾ ಬೇಸರವನ್ನುಂಟುಮಾಡುವಷ್ಟು ಕಠಿನಹೃದಯಳು ನಾನಲ್ಲ. ಸಂಸಾರವೆಂದರೆ ಹೀಗೆ ಒಂದರ ಹಿಂದೊಂದು ಕಷ್ಟ ಪರಂಪರೆಗಳು ಬಂದೇ ಬರುತ್ತವೆ. ನಾವು ಪರಮಾತ್ಮನನ್ನು ನಂಬಿ ಧೈರ್ಯದಿಂದ ಮುನ್ನಡೆದರೆ ನಮ್ಮ ಕಾರ್ಯಸಾಧನೆಯಾಗುವುದು. ನನ್ನ ಮಾತಂತಿರಲಿ. ನೀನು ಈ ಪ್ರಾಯದಲ್ಲಿ ವಿವಾಹವಾಗದೆ ಬಳಲುವೆಯೇಕೆ? ನಿನ್ನ ವಿದ್ಯೆಯು ಎಂದೋ ಮುಗಿದಿದೆ; ಯೋಗ್ಯವಾದ ಉದ್ಯೋಗವೂ ಇದೆ. ಈಗ ನೀನು ಮದುವೆಯಾಗಿ ಸಂಸಾರ ಹೂಡುವುದು ಯುಕ್ತವು. ನನ್ನ ಮಾತನ್ನು ಮನ್ನಿಸಿ, ಯೋಗ್ಯ ಕನ್ನೆಯನ್ನು ನಿಶ್ಚಯಿಸಿ, ಕ್ಷಿಪ್ರದಲ್ಲೇ ಮದುವೆಯಾಗು."

"ಅಮ್ಮಾ, ನಾನು ಈಗಲೆ ಮದುವೆಯಾಗಿ ಏನಾಗಬೇಕಾಗಿದೆ? ನನ್ನ ಮನಸ್ಸಿಗೊಪ್ಪುವ ಕನ್ಯೆಯು ದೊರೆತರೆ ಈಗಲೆ ವಿವಾಹವಾಗಲು ಸಿದ್ಧನು. ನಾನು ವರದಕ್ಷಿಣೆಯನ್ನು ಸ್ವೀಕರಿಸುವವನಲ್ಲ. ವರದಕ್ಷಿಣೆಯ ಆಸೆಯಿಂದ ಎಷ್ಟೋ ಯುವಕರು ಹಿಂದುಮುಂದು ನೋಡದೆ ವಿವಾಹವಾಗಿ, ಪ್ರತಿಕೂಲ ದಾಂಪತ್ಯದಿಂದಾಗಿ ಪರಿತಪಿಸಿ, ಮನೆಯ ಹೊರಗೆ ಸುಖಪಡೆಯಲಿಚ್ಛಿಸಿ, ನಾನಾ ತರದ ಕಷ್ಟನಷ್ಟಗಳನ್ನನುಭವಿಸುತ್ತಿರುವುದನ್ನು ನಾನು ಕಂಡಿರುವೆನು. ನನ್ನ ಆದರ್ಶ ಸ್ತ್ರೀಯು ಶ್ರೀಮಂತ

ಕುಟುಂಬದವಳಲ್ಲದಿದ್ದರೂ, ವಿಶೇಷ ಸೌಂದರ್ಯವಿಲ್ಲದವಳಾದರೂ ಚಿಂತೆಯಿಲ್ಲ. ಅವಳಲ್ಲಿ ಸದ್ಗುಣಗಳು ಮನೆಮಾಡಿ ಕೊಂಡಿರಬೇಕು. ವಿದ್ಯಾವತಿಯೂ ಆಗಿರಬೇಕು. ನಾನು ಅವಸರದಿಂದ ಮದುವೆಯಾಗಿ ಸಾವಕಾಶವಾಗಿ ಪಶ್ಚಾತ್ತಾಪ ಪಡಲು ಬಯಸುವುದಿಲ್ಲ. ದೈವೇಚ್ಛೆಯಿದ್ದರೆ, ನಾನು ಅಪೇಕ್ಷಿಸುವಂತಹ ಸ್ತ್ರೀಯು ದೊರೆತರೆ, ಮದುವೆಯಾಗುವೆನು. ಇಲ್ಲವಾದರೆ ನನ್ನ ಈಗಿನ ಸ್ಥಿತಿಯೆ ಯೋಗ್ಯವೆಂದು ನನಗೆ ತೋರುವುದು. ನಾನೊಬ್ಬನು ಮದುವೆಯಾಗದೆ ಉಳಿದರೆ ಲೋಕವೇನು ತಲೆಕೆಳಗಾಗುವುದಿಲ್ಲವಷ್ಟೆ! ಅಮ್ಮಾ, ನಿನ್ನ ಚಿಂತೆಯ ಕಾರಣವನ್ನು ದಯವಿಟ್ಟು ನನಗೆ ತಿಳಿಸು. ನನ್ನನ್ನು ಪುತ್ರವಾತ್ಸಲ್ಯದಿಂದ ನೋಡುತ್ತಿರುವೆ. ಪುತ್ರನೊಂದಿಗೂ ಹೇಳಲಾಗದ ಸಂಗತಿಯಿರುವುದೆ?"

"ಗೋವಿಂದಾ, ಲೀಲೆಯು ಹೆಗಲೆತ್ತರಕ್ಕೆ ಬಳೆದಿರುವುದು ನಿನಗೆ ಗೊತ್ತೇ ಇದೆ. ಇನ್ನು ಸದ್ಯದಲ್ಲೆ ಅವಳ ವಿವಾಹ ನಡೆಸದಿದ್ದರೆ ಹೇಗೆ? ನಿನ್ನೆ ನಾನು ಉತ್ಸವಕ್ಕೆ ಹೋಗಿದ್ದಾಗ, ಅಲ್ಲಿ ನನ್ನ ಹಿಂದಿದ್ದವರು 'ಮಗಳು ಕುದುರೆಯಂತೆ ಬೆಳೆದಿದ್ದಾಳೆ. ಇನ್ನೂ ಅವಳ ಮದುವೆಯ ಗೋಜಿಗೆ ಇವಳು ಹೋಗುವುದಿಲ್ಲ. ಬಹುಶಃ ಅವಳು ಯಾರಾದರೊಬ್ಬನ ಹಿಂದೆ ಹೋಗಬೇಕೆಂದು ಇವಳ ಮನಸ್ಸಿನಲ್ಲಿರಬಹುದು' ಎಂದು ಚುಚ್ಚುಮಾತನ್ನಾಡುತಿದ್ದುದು ಕೇಳಿಸಿತು. ಅವರು ನನ್ನ ವಿಷಯವಾಗಿಯೆ ಮಾತನಾಡುತಿದ್ದರೆಂಬುದು ನನ್ನ ಖಂಡಿತ ಅಭಿಪ್ರಾಯ. ಇಷ್ಟರೊಳಗೆ ಈಕೆಯ ಮದುವೆಯಾಗಬೇಕಿತ್ತು. ಈ ಪ್ರಾಯದಲ್ಲಿ ಸೀತೆಗೆ ಆಗಿತ್ತು. ಆದರೆ ಈಗ 'ಶಾರದಾ ಬಿಲ್ಲು' ಎಂದು ಏನೋ ಇರುವುದಂತೆ; ಹುಡುಗಿಯರಿಗೆ ಹದಿನಾಲ್ಕು ತುಂಬುವ ಮೊದಲು ಮದುವೆಮಾಡಬಾರದಂತೆ. ಲೀಲೆಗೆ ಮೊನ್ನೆ ಆಷಾಢದಲ್ಲಿ ಹದಿಮೂರು ತುಂಬಿ ಹದಿನಾಲ್ಕು ತೊಡಗಿರುವುದು. ಇನ್ನೂ ನಾವು ಮದುವೆಯ ಯೋಚನೆ ಮಾಡದಿರುವುದು ಸರಿಯೆ?"

"ತಾಯಿ, ಇತರರ ಮಾತಿಗೆ ಹೆಚ್ಚು ಬೆಲೆಕೊಡುವುದು ಸರಿಯಲ್ಲ. ಜನರ ಬಾಯಿಗೆ ಬೀಗಹಾಕುವುದು ನಮ್ಮಿಂದಾಗುವ ಕೆಲಸವೆ? ನಾವು

ನಮ್ಮ ಮನಸ್ಸಿಗೆ ಸರಿಯೆಂದು ತೋರುವುದನ್ನು ಮಾಡಬೇಕೇ ವಿನಾ ಜನ ರಾಡುವರೆಂದು ನಮ್ಮ ವರ್ತನೆಯನ್ನು ಬದಲಾಯಿಸಬಾರದು. ನೀನು ಒಳ್ಳೇ ಸುಧಾರಿತ ಸ್ತ್ರೀಯೆಂದು ನಾನು ಭಾವಿಸಿದ್ದೆನು. ಬಾಲ್ಯ ವಿವಾಹವು ಯೋಗ್ಯವಲ್ಲವೆಂದು ನಿನಗೆ ಗೊತ್ತಿಲ್ಲವೆ? ಇಷ್ಟು ಬೇಗ ಲೀಲೆಯ ವಿವಾಹ ವನ್ನು ಜರಗಿಸಿ ಅವಳ ಮೇಲೆ ತಾಯ್ತನವನ್ನು ಹೇರಬೇಡ. ಅರಿತ ನಿನಗೆ ನಾನು ಬಾಲ್ಯವಿವಾಹದಿಂದಾಗುವ ಹಾನಿಯನ್ನೂ ಪ್ರೌಢವಿವಾಹದ ಆವಶ್ಯಕತೆಯನ್ನೂ ವಿಶೇಷ ಹೇಳಬೇಕಾಗಿಲ್ಲ.''

''ಗೋವಿಂದಾ, ಈ ಹಾಳು ತಲೆಗೂದಲನ್ನು ತೆಗೆಸದಮಾತ್ರಕ್ಕೆ ನಾನು ದೊಡ್ಡ ಸಮಾಜ ಸುಧಾರಕಳೆಂದು ಭಾವಿಸಿದೆಯಾ? ಹಿಂದಿ ನಿಂದ ನಡೆದುಬಂದ ಸಂಪ್ರದಾಯದಲ್ಲಿ ನನಗೆ ಹೆಚ್ಚು ವಿಶ್ವಾಸ. ನಾನು ಎಂದೋ ಮುಂಡನ ಮಾಡಿಸಿಕೊಳ್ಳತಕ್ಕವಳು. ಆದರೆ ಸೀತೆಯು ನನ್ನ ಹಾಗೆಯೇ ವಿಧವೆಯು. ವಿಧವೆಯಾದ ಕೂಡಲೆ ಅವಳ ಕೇಶವನ್ನು ತೆಗೆಸಬೇಕೆಂದು ಎಲ್ಲರೂ ಹೇಳಿದರು. ಆದರೆ ನನ್ನ ಯಜಮಾನರು ಅವರ ಮಾತಿಗೆ ಕಿವಿಗೊಡದಿದ್ದುದರಿಂದ ಸೀತೆಯ ಕೂದಲುಳಿಯಿತು. ನನಗೆ ಈ 'ಜನ್ಮ' ಬಂದ ಮೇಲೆ ನಾನು ನನ್ನ ಕೂದಲು ತೆಗೆಸಿದರೆ, ಸೀತೆಗೆ ಬೇಸರವಾದೀತೆಂದು ಭಾವಿಸಿ ಹಾಗೆ ಮಾಡಲಿಲ್ಲ. ವಿಧವೆಯ ಕೂದಲಿನ ನೀರು ಭೂಮಿಗೆ ಬಿದ್ದರೆ, ಸತ್ತ ಗಂಡನಿಗೆ ದುರ್ಗತಿಯಾಗುವುದೆಂದು ಬಲ್ಲವರು ಹೇಳುವರು. ನಾನು ನನ್ನ ಸುಖಕ್ಕೋಸುಗ ಕೂದಲನ್ನು ಧರಿಸುವುದಲ್ಲವೆಂಬ ಸಂಗತಿಯು ಆ ಪರಮಾತ್ಮನಿಗೆ ಗೊತ್ತಿರುವುದು. ನನ ಈ ಪಾಪದಿಂದಾಗಿ ನನ್ನ ಯಜಮಾನರಿಗೆ ದುರ್ಗತಿಯೊದಗದಂತೆ ಕರುಣಿಸಬೇಕೆಂದು ನಾನು ನಿತ್ಯವೂ ಪ್ರಾರ್ಥಿಸುತ್ತಿರುವೆನು. ಅದಿರಲಿ. ತಮ್ಮಾ, ಲೀಲೆ ಇನ್ನೂ ಚಿಕ್ಕವಳೆ?''

''ಲೀಲೆಗಿಂತ ಐದಾರು ವರ್ಷ ಹೆಚ್ಚು ಪ್ರಾಯದ ಹುಡುಗಿಯರು ಮದುವೆಯಾಗದಿದ್ದಾರೆ.''

''ಕ್ರೈಸ್ತರಲ್ಲಿ ನೀನು ಹೇಳಿದಂತಿರಬಹುದು. ಆದರೆ ನಮ್ಮ ಸಮಾಜ ದಲ್ಲಿ ಹಾಗಿರುವುದೆಂದು ನಾನೆಂದಿಗೂ ಭಾವಿಸೆನು.''

"ಇಲ್ಲೇ, ಉಡುಪಿಯಲ್ಲೇ, ಇರುವರು. ಬೇಕಾದರೆ ತೋರಿಸ ಬಲ್ಲೆನು. ಮಂಗಳೂರಲ್ಲಿ ನಮ್ಮ ಜಾತಿಯ ೨೦—೨೨ ವರ್ಷದ ಕನ್ಯೆಯರು ಬೇಕಷ್ಟಿರುವರು."

"ಮಂಗಳೂರಲ್ಲಿ ಹೆಚ್ಚಾಗಿ ಶ್ರೀಮಂತರಿರುವರು. ಅವರು ಏನು ಮಾಡಿದರೂ, ಹೇಗೆ ಮಾಡಿದರೂ ಚಂದ. ಅವರು ಹುಡುಗಿಯರನ್ನು ಹಾಗೆಯೆ ಇರಗೊಡಿಸುತ್ತಾರೆಂದು, ಬಡವರಾದ ನಾವು ಹಾಗೆ ಮಾಡಿದರೆ ಸಮಾಜವು ಸುಮ್ಮನಿರುವುದೆ? 'ಇವಳಿಗೂ ಅವನಿಗೂ 'ಒಳ್ಳೇದು' ಉಂಟಂತೆ; ಇವಳು ಎರಡು ಗರ್ಭಗಳನ್ನು ತೆಗೆಸಿಕೊಂಡಳಂತೆ' ಎಂದು ಅಲ್ಲಸಲ್ಲದ ದೋಷಾರೋಪಣೆ ಮಾಡುವರು. ಊರಲ್ಲೆಲ್ಲ ಈ ಸುದ್ದಿಯು ಹಬ್ಬಿತೆಂದರೆ, ಅದು ಸತ್ಯವೊ ಸುಳ್ಳೊ ಎಂಬುದನ್ನು ವಿಚಾರಿಸುವವರು ಯಾರೂ ಇಲ್ಲ. ಎಲ್ಲರೂ ಅದನ್ನು ವೇದವಾಕ್ಯವೆಂದು ನಂಬುವವರೇ! ಮತ್ತು ತಮ್ಮ ಗುರುತು ಪರಿಚಯವಿದ್ದವರಿಗೆಲ್ಲಾ ಈ ಸುದ್ದಿಯನ್ನು ತಿಳಿಸಿ ಪ್ರಚಾರಮಾಡುವುದು ತಮ್ಮ ಪವಿತ್ರ ಕರ್ತವ್ಯವೆಂದು ಭಾವಿಸುವವರೇ! ಈ ರೀತಿಯಲ್ಲಿ 'ಬೆಳಕಿ'ಗೆ ಬಂದ ಆ ಕುಮಾರಿಯ ಗತಿಯೇನು? ಆಕೆಯನ್ನು ವಿವಾಹವಾಗುವವರಾರು? ತಮ್ಮಿಂದಾಗಿ ತಮ್ಮ ತಂದೆ ತಾಯಿಗಳು ಅನುಭವಿಸುವ ಕಷ್ಟವನ್ನು ನೋಡಿ, ಸಹಿಸಲಾರದೆ, ಎಷ್ಟೊ ಕನ್ಯೆಯರು ಬಾವಿಗೆ ಹಾರಿದುದಿದೆ. ಇನ್ನೆಷ್ಟೊ ಮಂದಿ 'ಚಿಮ್ಣಿ' ಎಣ್ಣೆಯನ್ನು ಸೀರೆಯ ಮೇಲೆ ಹೊಯ್ದು, ಬೆಂಕಿಕೊಟ್ಟು, ಸಮಾಜದ ಅಗ್ನಿಕುಂಡದಲ್ಲಿ ಆತ್ಮಸಮರ್ಪಣೆ ಮಾಡಿದುದಿದೆ. ಸಮಾಜವನ್ನು ಇದಿರಿಸಿ ನಿಲ್ಲುವಷ್ಟು ಚೇತನವಿಲ್ಲದ ನಮ್ಮಂತಹ ಬಡವರು ಸಮಾಜದ ಉಗ್ರ ಕೋಪಕ್ಕೆ ಅವಕಾಶ ಕೊಡದೆ, ಸಮಾಜಕ್ಕೆ ಹೆದರಿ ನಡೆಯುವುದೇ ಶ್ರೇಯಸ್ಕರವು. ಆದುದರಿಂದ ಗೋವಿಂದಾ, ಲೀಲೆಯ ವಿವಾಹದ ವಿಷಯದಲ್ಲಿ ನಾನು ಬಹಳ ಯೋಚನೆಗೊಳಗಾಗಿರುವೆನು. ನನ್ನ ಲೀಲೆಗೆ ಯೋಗ್ಯನಾದ ಪತಿಯು ದೊರೆಯುವನೇ? ಯೋಗ್ಯನಾದವನು ನೋಡಸಿಕ್ಕಿದರೂ, ಅವನನ್ನು ಕೊಂಡುಕೊಳ್ಳಲು ಬೇಕಾಗುವಷ್ಟು ಹಣವು ನಮ್ಮಲ್ಲೆಲ್ಲಿದೆ?"

"ಅಮ್ಮಾ, ನಿನ್ನಭಿಪ್ರಾಯವು ನನಗೆ ತಿಳಿಯಿತು. ಲೀಲೆಗೆ ಅನುರೂಪನಾದ ವರನನ್ನು ನಾನು ಹುಡುಕುವೆನು. ಎಲ್ಲ ಭಾರವನ್ನೂ ದೇವರ ಮೇಲೆ ಹಾಕಿ ನಾವು ಪುರುಷಪ್ರಯತ್ನ ಮಾಡಿದರೆ ಜಯವು ಖಂಡಿತ."

"ಗೋವಿಂದಾ, ಅಷ್ಟು ದೂರವೇಕೆ ಹೋಗಬೇಕು? ನೀನು ಅನ್ಯಥಾ ಭಾವಿಸುವುದಿಲ್ಲವಾದರೆ ನಾನೊಂದು ವಿಷಯ ಪ್ರಸ್ತಾಪಿಸಬೇಕೆಂದಿರುವೆನು. ವಿವಾಹಕ್ಕೆ ನಿನ್ನ ಆಕ್ಷೇಪವಿಲ್ಲವೆಂದು ನೀನೇ ಹೇಳಿರುವೆ. ನನ್ನ ಲೀಲೆಯ ಗುಣಗಳು ನಿನ್ನ ಮನಸ್ಸಿಗೆ ಸೇರುವುದಿಲ್ಲವೇನು? ನೀನೇ ಆಕೆಯ ಕೈಹಿಡಿದು ನಮ್ಮನ್ನುದ್ಧಾರಮಾಡಬೇಕೆಂದು ಸೆರಗೊಡ್ಡಿ ಬೇಡುತ್ತೇನೆ"

ಚಂದ್ರಭಾಗಮ್ಮನ ಕಣ್ಣಲ್ಲಿ ನೀರು ತುಂಬಿದ್ದಿತು. ಗೋವಿಂದ ರಾಯರು ಅವಳ ಕಾಲಿಗೆರಗಿ "ಅಮ್ಮಾ, ಲೀಲೆಯಂತಹ ಪತ್ನಿಯು ನನಗೆ ಸಿಗಬೇಕಾದರೆ ನಾನು ಪೂರ್ವಜನ್ಮದಲ್ಲಿ ಬಹಳ ಪುಣ್ಯ ಮಾಡಿರಬೇಕು. ಆದರೆ, ಅಮ್ಮಾ, ನನ್ನನ್ನು ಕ್ಷಮಿಸು. ಲೀಲೆ ಏನೆಂದರೂ ಹಸುಗೂಸು. ನನ್ನ ಪ್ರಾಯ ಮುವ್ವತ್ತೆರಡು. ಅಷ್ಟು ಸಣ್ಣವಳನ್ನು ನಾನು ಏನೆಂದು ಮದುವೆಯಾಗಲಿ? ಮದುವೆಯಿಂದ ಪತಿಪತ್ನಿಯರಿಬ್ಬರಿಗೂ ಸುಖ ಸಿಗಬೇಕು. ಆಕೆಯ ಪ್ರಾಯವನ್ನು ಯೋಚಿಸಿದರೆ ನಾನು ಈಗಾಗಲೇ ಮುದುಕನು. ಅಂತಹ ಸುಕುಮಾರಿಯ ಭವಿಷ್ಯವನ್ನು ನಾನು ನನ್ನ ಸ್ವಾರ್ಥಕ್ಕೋಸುಗ ಹಾಳು ಮಾಡೆನು. ನಾನು ನನ್ನ ಮನಸ್ಸಾಕ್ಷಿಗೆ ವಿರೋಧವಾಗಿ ವರ್ತಿಸೆನು. ಲೀಲೆಯು ನನ್ನನ್ನು ವರಿಸುವುದು ಎಷ್ಟು ಮಾತ್ರಕ್ಕೂ ಯೋಗ್ಯವಲ್ಲವೆಂದು ನನಗೆ ತೋರುವುದು. ಆದುದರಿಂದ ಗುಣದಲ್ಲಿಯೂ ವಯಸ್ಸಿನಲ್ಲಿಯೂ ರೂಪದಲ್ಲಿಯೂ ಅವಳಿಗೆ ಅನುರೂಪನಾದ ವರನನ್ನು ಹುಡುಕುವೆನು. ನನ್ನ ಪ್ರಯತ್ನವು ಸಫಲವಾಗಬಹುದೆಂದು ನನ್ನ ನಂಬುಗೆ." ಎಂದು ಹೇಳುತ್ತಿರುವಷ್ಟರಲ್ಲಿ ಲೀಲೆಯು ಮನೆಹೊಕ್ಕಳು. ಅವರು ಆ ಮಾತನ್ನಲ್ಲಿಗೇ ನಿಲ್ಲಿಸಿದರು.

---

೩

ಸೀತೆಯು ಪರೀಕ್ಷೆ ಮುಗಿದೊಡನೆ ಮಂಗಳೂರನ್ನು ಬಿಟ್ಟು ಉಡುಪಿಗೆ ಬಂದಳು. ಅವಳನ್ನು ಕಂಡಾಗ ಅವಳ ತಾಯಿಗೂ ತಂಗಿಗೂ ಆದ ಸಂತೋಷವನ್ನು ಅಷ್ಟಿಷ್ಟೆಂದು ಹೇಳಲಸದಳ. ಸೀತೆಗೆ ತನ್ನ, ತನ್ನ ಶಾಲೆಯ, ತನ್ನ ಸಹಪಾಠಿಗಳ ನೂರಾರು ಸಣ್ಣ ಪುಟ್ಟ ವಿಷಯಗಳನ್ನು ಹೇಳಲು ಲೀಲೆಯು ಹಾತೊರೆಯುತಿದ್ದಳು. ಲೀಲೆಯು ಸೀತೆಗೆ ಕೈ ಕಾಲು ತೊಳೆದು ಬೇರೆ ಸೀರೆಯುಡುವಷ್ಟು ಅವಕಾಶವನ್ನೂ ಕೊಡದೆ, ಅವಳ ಕೈಹಿಡಿದು ನೇರಾಗಿ ಮನೆಯ ಹಿಂದಿನ ತೋಟಕ್ಕೆ ಕರೆದುಕೊಂಡು ಹೋಗಿ, ತಾನು ಬೆಳೆಸಿದ ಹೂಗಿಡಗಳನ್ನೆಲ್ಲಾ ತೋರಿಸಿದಳು. ಹೂದೋಟವು ಸಣ್ಣದಾಗಿದ್ದರೂ, ಅದರಲ್ಲಿ ಸೌಂದರ್ಯ ಸುವಾಸನೆಗಳಿಗೆ ಹೆಸರಾದ ಹೂಗಳೆಲ್ಲ ಅರಳಿದ್ದುವು. ತನ್ನ ಪ್ರೀತಿಯ ಸೇವಂತಿಗೆ ಗಿಡವನ್ನು ಒಮ್ಮೆ ತಮ್ಮ ದನವು ತುಳಿದು ಹಾಳುಮಾಡಲು, ತಾಯಿಯ ಅಜಾಗರೂಕತೆಗಾಗಿ ತಾನು ಕೋಪದಿಂದಲೂ ದುಃಖದಿಂದಲೂ ಊಟಬಿಟ್ಟುದನ್ನೂ, ತನ್ನನ್ನು ಸಮಾಧಾನಗೊಳಿಸಲು ಯತ್ನಿಸಿ, ನಿರಾಶಳಾಗಿ, ತಾಯಿಯೂ ಊಟಮಾಡದೆ ಮಲಗಿದುದನ್ನೂ, ಮರುದಿನ ಪ್ರಾತಃಕಾಲ ಕೋಪವು ಮಾಯವಾಗಿ ತನಗೆ ಪಶ್ಚಾತ್ತಾಪವಾಗಲು, ತಾನು ತಾಯಿಯ ಕ್ಷಮೆ ಬೇಡಲು, 'ರಾಜಿ'ಯಾಗಿ, ಹೇಗೆ ಇಬ್ಬರೂ ಬೇರೊಂದು ಸೇವಂತಿಗೆ ಗಿಡವನ್ನು ನೆಟ್ಟು ಬೇಲಿ ಹಾಕಿದೆವೆಂಬುದನ್ನು ಲೀಲೆಯು ಕೂಲಂಕಷವಾಗಿ ಹೇಳಿದಳು. ಆ ಹೂಗಿಡಗಳಲ್ಲಿ ಪ್ರತಿಯೊಂದನ್ನೂ ತಾನು ಎಲ್ಲೆಲ್ಲಿಂದ ತಂದುದು, ಅವುಗಳಿಗೆ ತಾನೇ ಸ್ವಂತ ಕೈಗಳಿಂದ ನೀರೆರೆಯುತ್ತಿರುವುದು, ತನಗೆ ಸೌಖ್ಯವಿಲ್ಲದಿದ್ದಾಗ ಮಾತ್ರ ಗೋವಿಂದ ಮಾಸ್ತರರು ಆ ಗಿಡಗಳ ಆರೈಕೆ ನೋಡುತಿದ್ದುದು, ಮುಂತಾದುವನ್ನೂ ವಿವರಿಸಿ ಹೇಳಿದಳು.

ಸೀತೆಯು ಎಲ್ಲದಕ್ಕೂ ಹೂಂಗುಟ್ಟುತಿದ್ದಳು. ಗೋವಿಂದಮಾಸ್ತರರ ಹೆಸರನ್ನು ಕೇಳುತ್ತಲೆ, "ಲೀಲೆ, ಅಮ್ಮನು ನನಗೆ ಬರೆದ ಪತ್ರಗಳಲ್ಲಿಯೂ ಈ ಗೋವಿಂದಮಾಸ್ತರರ ಹೆಸರಿರುತಿತ್ತು. ಅವರು

ಯಾರು? ಹೇಗಿರುವರು? ಅವರು ಸಣ್ಣ ಪ್ರಾಯದವರೆ, ಅಥವಾ ಕೆಲಸದಿಂದ ನಿವೃತ್ತರಾದ ಮುದುಕರೆ? ಇದೇ ಊರವರೆ? ಅವರಿಗೆ ಮಕ್ಕಳೆಷ್ಟು? ನಿನ್ನ ಶಾಲೆಗೆ ಅವರ ಹುಡುಗಿಯರು ಬರುವರೆ?" ಎಂದು ಪ್ರಶ್ನೆಯ ಸುರಿಮಳೆಯನ್ನೆ ಕರೆದಳು.

"ಅಕ್ಕಾ, ಹೀಗೆ ನೀನು ಒಮ್ಮೆಗೆ ಇಷ್ಟು ಪ್ರಶ್ನೆಗಳನ್ನು ಕೇಳಿದರೆ ನಾನು ಹೇಗೆ ಉತ್ತರಕೊಡಲಿ? ಅವರು ಇದೇ ಊರವರು. ಪ್ರಾಯ ಮೂವತ್ತೆರಡೆಂದು ಅವರು ಹೇಳುತ್ತಾರೆ. ಆದರೆ ಅವರನ್ನು ನೋಡಿದರೆ ಇಪ್ಪತ್ತೈದಕ್ಕಿಂತ ಹೆಚ್ಚು ಪ್ರಾಯದವರಲ್ಲವೆಂದು ತೋರುತ್ತದೆ. ಸದಾ ನಗು ಮೊಗದವರು; ಅವರಿಗೆ ಕೋಪಬಂದುದನ್ನು ನಾನಾವಾಗಲೂ ನೋಡಿಲ್ಲ. ಇನ್ನೂ ಮದುವೆಯಾಗಿಲ್ಲ; ಏಕೆಂದು ನಾನು ಕೇಳಿದಾಗ 'ಮುದುಕನಾದ ನನಗೆ ಕನ್ಯೆಯನ್ನು ಕೊಡುವವರಾರು?' ಎಂದರು. ಐವತ್ತು ಅರುವತ್ತು ವರ್ಷದವರು ಮದುವೆಮಾಡಿಕೊಂಡ ನಿದರ್ಶನವನ್ನು ನಾನು ತೋರಿಸಿ ಕೊಡಲು, ತನಗೆ ಅನುಕೂಲೆಯಾದ ಸ್ತ್ರೀಯು ದೊರೆತಲ್ಲಿ ಕೂಡಲೆ ಮದುವೆಯಾಗುವುದಾಗಿ ಹೇಳಿದರು. ಅವರ ಮನಸ್ಸಿಗೊಪ್ಪುವ ಕನ್ಯೆಯನ್ನು ಬಹುಶಃ ಬ್ರಹ್ಮನು ಸೃಷ್ಟಿಸಿಲ್ಲ! ಅಕ್ಕಾ, ಅವರಿಲ್ಲದಿರುತ್ತಿದ್ದರೆ ಇಂದು ನಾನು ನಿನಗೆ ನೋಡಸಿಗುತಿದ್ದಿಲ್ಲ."

ಕೊನೆಯ ಮಾತುಗಳನ್ನಾಡುವಾಗ ಲೀಲೆಯ ಕಂಠವು ಬಿಗಿದು ಬಂದಿತು; ಕಣ್ಣಲ್ಲಿ ಕೃತಜ್ಞತಾ ಸೂಚಕವಾದ ಬಾಷ್ಪವು ಹೊಳೆಯ ತೊಡಗಿತು. ಸೀತೆಯು ಅವಳನ್ನು ಬಿಗಿದಪ್ಪಿ, "ತಂಗೀ ನಿನ್ನನ್ನು ಬದುಕಿಸಿ ಕೊಟ್ಟ ಆ ಮಹಾನುಭಾವರ ವಿಷಯವಾಗಿ ನಾನು ತುಂಬಾ ಕೇಳಿದೆ. ಇನ್ನು ಅವರನ್ನು ನೋಡಿ, ನನ್ನ ಕೃತಜ್ಞತೆಯನ್ನು ಸಲ್ಲಿಸಿ, ಕೃತಾರ್ಥಳಾಗುತ್ತೇನೆ" ಎಂದಳು.

"ಅವರು ನಿತ್ಯವೂ ಸಾಯಂಕಾಲ ಇಲ್ಲಿಗೆ ಬರುವರು. ಈಗಾಗಲೆ ಅವರು ಬಂದಿರಲೂ ಬಹುದು. ಮನೆಯನ್ನು ಸೇರೋಣ."

ಅಕ್ಕತಂಗಿಯರಿಬ್ಬರೂ ಕೈಕೈ ಹಿಡಿದು ಮನೆಯನ್ನು ಪ್ರವೇಶಿಸಿದರು. ಕಾಫಿಕುಡಿದಾದನಂತರ ಚಂದ್ರಭಾಗಮ್ಮನು "ಸೀತೆ, ನಿನ್ನ ಸೋದರತ್ತೆ ಕಾವೇರಮ್ಮನು ನಿನ್ನ ತಂದೆಯುವರು ತೀರಿದಾಗ ಇಲ್ಲಿಗೆ ಬಂದಿದ್ದಳಲ್ಲವೆ? ಅವಳ ಗಂಡ ಗೋಪಾಲರಾಯರು ಈಗ ನಿವೃತ್ತರಾಗಿ, ಇಲ್ಲಿಗೆ ಬಂದು ಬಿಡಾರವಮಾಡಿಕೊಂಡಿದ್ದಾರೆ. ಅವರ ಮಗ ಅನಂತನನ್ನು ನೋಡಿದ ನೆನಪು ನಿನಗಿದೆಯೆ? ಇರಲಿಕ್ಕಿಲ್ಲ. ನಾನು ಅವನನ್ನು ನೋಡಿದುದು ಅವನು ಐದಾರು ವರ್ಷದವನಿದ್ದಾಗ! ಈಗ ಅವನು ಎಫ್. ಎಲ್. ನಲ್ಲಿ ಓದುತ್ತಾನಂತೆ. ಪರೀಕ್ಷೆ ಮುಗಿದೊಡನೆ, ಅಂದರೆ ಇನ್ನು ಹತ್ತು ಹದಿನೈದು ದಿನಗಳಲ್ಲಿ ಅವನು ಇಲ್ಲಿಗೆ ಬರುವನಂತೆ. ಬಾಲ್ಯದಲ್ಲಿ ಅವನು ಮುದ್ದು ಮುದ್ದಾಗಿದ್ದು ಬಹಳ ಒಳ್ಳೆಯ ಹುಡುಗನಾಗಿದ್ದ. ಈಗ ಹೇಗಾಗಿದ್ದಾನೊ ನೋಡಬೇಕು. ಕಾವೇರಮ್ಮನೂ ಬಹಳ ಒಳ್ಳೆಯವಳು. ಅವರು ಅಷ್ಟು ಶ್ರೀಮಂತರಾದಾಗ್ಯೂ ಅವಳಿಗೆ ಜಂಬವಿಲ್ಲ. ಬಂದ ದಿನವೆ ನಮ್ಮಲ್ಲಿಗೆ ಬಂದು ಮಾತನಾಡಿ ಹೋದಳು. ಲೀಲೆಯೆಂದರೆ ಅವಳಿಗೆ ಪಂಚಪ್ರಾಣ. ಅವಳಿಗೂ ಒಬ್ಬಳು ಮಗಳಿದ್ದಳು; ಸಣ್ಣ ಪ್ರಾಯದಲ್ಲೆ ತೀರಿಹೋದಳು. ಇವಳನ್ನು ಅವಳು ಮಗಳಂತೆಯೆ ನೋಡಿಕೊಳ್ಳುತ್ತಿರುವಳು. ಇವಳನ್ನು ಅವಳು ಕರೆಯುವುದೇ 'ಸೊಸೆ' ಎಂದು. ಇವಳು ನಿನ್ನೊಡನೆ ಇಷ್ಟುಹೊತ್ತು ಏನೆಲ್ಲಾ ಮಾತಾಡಿದಳು? ಕಾವೇರಮ್ಮನ ಸುದ್ದಿಯನ್ನು ಇವಳು ಎತ್ತಲಿಲ್ಲವೆಂದು ನಾನು ಖಂಡಿತ ಬಲ್ಲೆ. ಏಕೆಂದರೆ, ಆ ಮಾತೆತ್ತಿದರೆ, ಕಾವೇರಮ್ಮನು ತನ್ನನ್ನು 'ಸೊಸೆ' ಯೆಂದು ಕರೆಯುವುದನ್ನು ತಿಳಿಸದಿರಲು ಇವಳಿಗೆ ಸಾಧ್ಯವೇ ಇಲ್ಲ! ನೋಡು ಸೀತೆ, ಅವರು ದೊಡ್ಡವರು, ಹಾಗೆಲ್ಲಾ ಹೇಳುವರೆಂದು ನಾವು ಅದನ್ನು ನಂಬಿ ಕುಳಿತುಕೊಳ್ಳಲಾಗುತ್ತದೆಯೆ? ಅವರು ವಿನೋದಕ್ಕಾಗಿ ಹೇಳುತ್ತಿರಬಹುದು. ಆದರೆ, ಅವರು ಹೇಳಿದಂತೆ ಮಾಡಲು ಸಿದ್ಧರಿದ್ದಾರೆನ್ನಲು ಬರುವುದಿಲ್ಲ. ಇದೆಲ್ಲಾ ಲೀಲೆಗೇನು ಗೊತ್ತು! ಪಾಪ! 'ಸೊಸೆ'ಯೆಂದು ಕರೆದಂದಿನಿಂದ ಇವಳಿಗೆ ಆಕಾಶವೇ ಕೈಗೆ ಸಿಕ್ಕಿದೆ! ಮುಖವನ್ನು ಇಡಿದಿನ ಕನ್ನಡಿಯಲ್ಲಿ ನೋಡದಿದ್ದರೆ ಇವಳಿಗೆ ಸಮಾಧಾನವೇ ಇಲ್ಲ. ಅವರ

ಮನೆಗೆ ಇವಳು ನಿತ್ಯವೂ ಹೋಗುತ್ತಿರುವಳು. ಇಲ್ಲಿ ತೋಟದಲ್ಲಿ ಅರಳಿದ ಹೂಗಳಲ್ಲಿ ಹೆಚ್ಚಿನವನ್ನು ಅಲ್ಲಿಗೆ ಕೊಂಡೊಯ್ಯುವಳು. ಲೀಲೆ, ನೀನು ಹೀಗೆ ಲಜ್ಜೆಯಿಂದ ತಲೆತಗ್ಗಿಸಿದೆಯೇಕೆ? ನಾನು ಹೇಳಿದ ಇಷ್ಟು ಮಾತಿನಲ್ಲಿ ಒಂದಾದರೂ ಸುಳ್ಳಿದೆಯೆ? ನೀನು ಅವರ ಮನೆಗೆ ಹೋಗುವಾಗ ಹೊಸ ಹೊಸ ಸೀರೆಯನ್ನುಡುವುದಿಲ್ಲವೆ? ಮೊನ್ನೆ ಮೊನ್ನೆ ನಿನಗೆ ಮೂರು ಹೊಸ ಸೀರೆಗಳನ್ನು ನಾನು ತೆಗೆಸಿಕೊಡಲಿಲ್ಲವೆ? ಸೀತೆಯ ಲಗ್ನದ ಸೀರೆ, ಮಂಟಪದ ಸೀರೆಗಳನ್ನು ನೀನು ಉಟ್ಟುಕೊಂಡು ಅವರಲ್ಲಿಗೆ ಹೋಗಲಿಲ್ಲವೆ? ನೀನು ಹೀಗೆ ಮಾಡುವುದು ತಪ್ಪೆಂದು ನಾನು ಹೇಳುವುದಿಲ್ಲ. ಆದರೆ ಕಾವೇರಮ್ಮನ ಸೊಸೆಯಾಗುವ ಯೋಗ್ಯತೆಯು ನಿನಗಿದೆಯೆ ಎಂಬುದನ್ನು ಯೋಚಿಸಬೇಕು. ಅವರಿಗೂ ನಮಗೂ ಹಿಂದಿನ ಸಂಬಂಧವಿದೆಯೆಂಬುದೇನೊ ನಿಜ. ಆ ಕಾರಣದಿಂದಾಗಿ ನೀನು ಅವರ ಮನೆಗೆ ಹೋಗಿ ಬರುತ್ತಿರಬೇಕು. ಆದರೆ ಅನಂತನ ಹೆಂಡತಿಯಾಗುತ್ತೀಯೆಂದು ನೀನು ಕನಸಿನಲ್ಲಿಯೂ ಆಶಿಸಕೂಡದು. ಏಕೆಂದರೆ, ಹಾಗೆ ನೀನು ಅತ್ಯಾಶೆಯಿಟ್ಟುಕೊಂಡರೆ, ಅನಂತನಿಗೆ ಬೇರೊಬ್ಬರೊಂದಿಗೆ ವಿವಾಹವಾದಲ್ಲಿ ಅದನ್ನು ನಿನ್ನಿಂದ ಸಹಿಸಲಿಕ್ಕಾಗದು. ನಿನಗೇಕೆ ದೇವರು ಅನುರೂಪನಾದ ಗಂಡನನ್ನು ಕರುಣಿಸಬಾರದು?" ಎಂದಳು.

ಲೀಲೆಯು ಹುಸಿಮುನಿಸಿನಿಂದ "ಅಮ್ಮಾ, ದಿನಬೆಳಗಾದರೆ ನಿನಗೆ ನನ್ನ ಮದುವೆಯ ಯೋಚನೆ. ಮಾತನಾಡಲು ನಿನಗೆ ಬೇರೆ ವಿಷಯವೇ ಸಿಗುವುದಿಲ್ಲವೆ? ಮೊನ್ನೆ ನಾನು ಕಾವೇರಮ್ಮನ ಮನೆಯಿಂದ ಬರುವಾಗ ನೀನು ಗೋವಿಂದಣ್ಣನೊಡನೆ ನನ್ನ ಮದುವೆಯ ಪ್ರಸ್ತಾಪ ಮಾತನಾಡುತಿದ್ದಿರಬೇಕು. ನಾನು ಒಳಗೆ ಬಂದಕೂಡಲೆ ನೀವು ಸಂಭಾಷಣೆಯನ್ನು ಅಲ್ಲಿಗೇ ನಿಲ್ಲಿಸಿದಿರಿ. ನನ್ನ ಮದುವೆಯನ್ನು ಬೇಗ ತೀರಿಸಿ, ನನ್ನನ್ನು ಗಂಡನ ಮನೆಗೆ ಕಳುಹಿಸಿ, ನಿಶ್ಚಿಂತಳಾಗಬೇಕೆಂದು ಭಾವಿಸುವೆಯಾ? ನಾನು ಇಲ್ಲಿ ನಿನ್ನ ಕಣ್ಣೆದಿರಿಗಿರುವುದನ್ನು ನಿನ್ನಿಂದ ಸಹಿಸಲಾಗದೆ? ಹಾಗಾದರೆ ಮನಬಿಚ್ಚಿ ಹೇಳು. ನಾನು ಯಾವುದಾದರೂ ಕೆರೆ ಬಾವಿಯನ್ನು ಹುಡುಕುವೆನು. ನನ್ನ ಕೈಯಲ್ಲಿ ನೀನು ಆಕಾಶ

ನೋಡಿದುದು ಯಾವಾಗ? ಕಾವೇರಮ್ಮನವರಿಗೆ ಮನೆಯಲ್ಲಿ ಬೇಸರವಾಗ ಬಹುದಾದುದರಿಂದ ನಾನು ನಿತ್ಯವೂ ಸಾಯಂಕಾಲ ಅವರಲ್ಲಿಗೆ ಹೋಗಿ ಬರಬೇಕೆಂದು ನೀನೇ ಆಜ್ಞಾಪಿಸಿದೆ. ಅವರು ಬಹಳ ಒಳ್ಳೆಯವರು. ನನ್ನೊಡನೆ ಬಹಳ ಪ್ರೀತಿಯಿಂದಲೂ ಸಲುಗೆಯಿಂದಲೂ ವರ್ತಿಸು ತ್ತಾರೆ. ಆದುದರಿಂದ ನನಗೆ ಅವರ ಸಹವಾಸವೆಂದರೆ ಇಷ್ಟ. ಅವರಿ ಗಿಂತ ಶ್ರೀಮಂತರಾದವರು ಈ ಊರಲ್ಲೆಷ್ಟೋ ಮಂದಿ ಇದ್ದಾರೆ. ನನ್ನ ಗೆಳತಿಯರಲ್ಲೂ ಶ್ರೀಮಂತ ಕುಟುಂಬದವರಿದ್ದಾರೆ. ಆದರೆ ನಾನು ಒಂದು ದಿನವಾದರೂ ಯಾರಾದರೊಬ್ಬಳ ಮನೆಗೆ ಹೋದುದಿದೆಯೆ? ಕೇವಲ ನಿನ್ನ ಒತ್ತಾಯಕ್ಕಾಗಿ ನಾನು ಕಾವೇರತ್ತೆಯ ಮನೆಗೆ ಹೋಗುತಿದ್ದೆ. ಇನ್ನು ಅಕ್ಕ ಬಂದಳಲ್ಲವೆ? ಅವಳೇ ಅಲ್ಲಿಗೆ ಹೋಗಲಿ. ಅವರ ಮನೆಗೆ ಹೋಗಿ ನನಗೆ ಸಿಗಬೇಕಾದುದೇನು? ನಾನು ಸಾಯಂಕಾಲವನ್ನು ನನ್ನ ಹೂದೋಟದಲ್ಲೆ ಕಳೆಯುವೆನು. ನಾನು ಅವರ ಮನೆಗೆ ಹೋಗಿದ್ದಾಗ ಅಲ್ಲಿ ಏನೇನು ನಡೆಯಿತೆಂದು ನೀನು ಕೇಳುತಿದ್ದುದರಿಂದ, ನಾನು ಏನನ್ನೂ ಮುಚ್ಚಿಡದೆ ಎಲ್ಲವನ್ನೂ ಹೇಳಿರುವೆನು. ಅವರು ವಿನೋದಕ್ಕಾಗಿ 'ಸೊಸೆ'ಯೆಂದು ಕರೆಯುವರೆಂದು ನಾನು ಹೇಳಿದುದನ್ನು ನೀನು ವಿಪ ರೀತವಾಗಿ ತಿಳಿದುಕೊಂಡೆ. ಅವರು ನಿಜವಾಗಿಯೂ ನನ್ನನ್ನು ಸೊಸೆ ಯಾಗಿ ಸ್ವೀಕರಿಸುವರೆಂದು ನಾನು ನಿನ್ನೊಡನೆ ಹೇಳಿರುವೆನೆ? ನನಗೇನೂ ನೆನಪಿಲ್ಲ. ನನ್ನ ಜಾತಕವನ್ನು ಅವರಿಗಿತ್ತು ಅವರ ಹುಡುಗನ ಜಾತಕ ವನ್ನು ತರಿಸಬೇಕೆಂದು ಹೇಳಿರುವೆನೆ? ನನ್ನ ಹಳೇ ಸೀರೆಗಳನ್ನುಟ್ಟು ಕೊಂಡು ಅವರ ಮನೆಗೆ ಹೋಗಬಾರದೆಂದು ನೀನೇ ಮೊನ್ನೆ ಮೂರು ಹೊಸ ಸೀರೆಗಳನ್ನು ತರಿಸಿಕೊಟ್ಟೆ. ಅಕ್ಕನ ಸೀರೆಗಳನ್ನು ಯಾರೂ ಉಟ್ಟುಕೊಳ್ಳದೆ ಹಾಗೆಯೆ ಇಟ್ಟರೆ ಅವು ಹಾಳಾಗುವುವೆಂದೂ ನಾನು ಅವುಗಳನ್ನುಡಬೇಕೆಂದೂ ನೀನು ಎಷ್ಟೋ ಸಲ ಹೇಳಿದ ಮೇಲೆ ನಾನು ಒಪ್ಪಿ ನಿನ್ನಾಜ್ಞೆಯಂತೆ ನಡೆದರೆ, ಈಗ ಅಕ್ಕನಿದಿರು ನನ್ನನ್ನು ದೂರುವೆ. ನಾನು ಇಡಿದಿನ ಕನ್ನಡಿಯಲ್ಲಿ ಮುಖನೋಡುತಿದ್ದೆನೆಂದು ಹೇಳಿದೆ. ನಾನು ಹಾಗೆ ಮಾಡುತಿದ್ದುದೇಕೆಂದು ನಿನಗೂ ಗೊತ್ತಿರಬಹುದು. ನನ್ನ

ನಾಲಗೆಯಡಿಯಲ್ಲಿ ಎರಡು ಬೊಕ್ಕೆಗಳೆದ್ದಿದ್ದುವು. ಅವನ್ನೇ ನಾನು ಕನ್ನಡಿಯಲ್ಲಿ ನೋಡುತಿದ್ದುದು. ಮೊನ್ನೆ ನನ್ನ ಕಣ್ಣುರಿಯುತಿದ್ದಿತು. ಎಲ್ಲಾದರೂ ಕೆಂಗಣ್ಣು ಆಗಿದೆಯೊ ಎಂದು ಕನ್ನಡಿಯಲ್ಲಿ ನೋಡು ತಿದ್ದೆ. ಕೆಂಗಣ್ಣಾದವರು ಶಾಲೆಗೆ ಬರಬಾರದೆಂದು ಹೇಳಿರುವರು. ಜ್ವರದಿಂದೆದ್ದ ನಾನು ಹೆಚ್ಚಾಗಿ ಹೂಮುಡಿಯಬಾರದೆಂದೂ ಹೂವನ್ನು ಕಾವೇರತ್ತೆಯ ಮನೆಗೆ ಕೊಂಡುಹೋಗಬೇಕೆಂದೂ ನಿನ್ನಪ್ಪಣೆಯಾಯಿತು. ಅದನ್ನು ಶಿರಸಾವಹಿಸಿದುದರಿಂದ ಈಗ ನೀನು ನನ್ನನ್ನು ತಮಾಷೆ ಮಾಡಲು ಅವಕಾಶವಾಯಿತು'' ಎಂದು ಹೇಳಿ ನಕ್ಕಳು.

ಚಂದ್ರಭಾಗಮ್ಮನು ''ಸೀತೆ, ನಮ್ಮ ಲೀಲೆಯು ಒಳ್ಳೇ 'ಹೇರಿಂಗ್' ಮಾಡುತ್ತಾಳೆ. ಇವಳನ್ನು ವಕಾಲತಿಗೆ ಕಳುಹಿಸೋಣವೆ?'' ಎಂದು ಕೇಳಿದಳು.

ಲೀಲೆಯು ''ಅಮ್ಮಾ, ನನ್ನನ್ನು ಬೇಗನೆ ಗಂಡನ ಮನೆಗೆ ಕಳುಹಿಸ ಬೇಕೆಂದು ನೀನು ಹವಣಿಸುತ್ತಿರುವೆ. ವರನು ದೊರೆತರೆ ನನ್ನ ವಿದ್ಯಾ ಭ್ಯಾಸವನ್ನು ಈಗಿಂದೀಗಲೆ ನಿಲ್ಲಿಸಲಿಕ್ಕೆ ನೀನು ಹಿಂಜರಿಯುವವಳಲ್ಲ. ಬೇಕೆಂದೇ ವಕಾಲತಿನ ಸುದ್ದಿಯನ್ನೆತ್ತಬೇಡ. ಗೋವಿಂದಣ್ಣನೇನು ಇನ್ನೂ ಬರಲಿಲ್ಲ? ನನ್ನ ಈ ಪಾಪಿ ಜೀವವನ್ನುಳಿಸಿದುದಕ್ಕಾಗಿ ಇನ್ನು ಈಕೆಯೊಬ್ಬಳು ಅವರ ಉಪಕಾರಸ್ಮರಣೆ ಮಾಡುವುದು ಬಾಕಿ ಉಂಟಂತೆ! ಅವರು ಇನ್ನೂ ಬಾರದಿರುವುದರಿಂದ, ಪಾಪ! ಈಕೆಗೆ ತುಂಬಾ ನಿರಾಶೆ ಯಾಗಿರಬೇಕು. ಅಕ್ಕಾ, ನೀನು ದೊಡ್ಡ ಭಾಷಣವನ್ನೇ ತಯಾರಿಸಿ ಬಾಯಿಪಾಠ ಮಾಡಿಕೊಂಡಿರಬಹುದಲ್ಲವೆ? ಅಮ್ಮಾ, ಗೋವಿಂದಣ್ಣ ಬಂದರೆ, ನಾವಿಬ್ಬರೂ ಕಾವೇರತ್ತೆಯ ಮನೆಗೆ ಹೋಗಿದ್ದೇವೆಂದೂ ನಾಳೆ ಸಾಯಂಕಾಲ ಬೇಗನೆ ಬರಬೇಕೆಂದು ಅಕ್ಕನು ಹೇಳಿದಳೆಂದೂ ಅವರಿಗೆ ತಿಳಿಸು. ಇನ್ನು ನಾವು ಹೋಗುತ್ತೇವೆ. ಕಾವೇರತ್ತೆಯು ನನ್ನನ್ನು ಕಾದು ಕುಳಿತುಕೊಂಡಿರಬಹುದು. ಅಕ್ಕಾ, ಹೋಗೋಣವೆ?'' ಎಂದಳು.

ಲೀಲೆಯನ್ನು ಕೆಣಕುವುದೆಂದರೆ ಚಂದ್ರಭಾಗಮ್ಮನಿಗೆ ಬಹಳ ಇಷ್ಟ. ಇಂತಹ ಸುಸಂದರ್ಭವನ್ನು ಅವಳು ಹೇಗೆ ತಾನೆ ಹೋಗಗೊಟ್ಟಾಳು? ಅವಳು ಹೇಳತೊಡಗಿದಳು—"ಲೀಲೆ, ನಿನಗೆ ಕಾವೇರಮ್ಮನ ಮನೆಗೆ ಹೋಗುವ ಆವಶ್ಯಕತೆಯಿಲ್ಲವೆಂದು ಈಗ ಹೇಳಿದೆಯಷ್ಟೆ! ಅಲ್ಲಿಗೇ ಹೋಗಲು ಹೊರಟೆಯೇಕೆ? ನೀನಿಲ್ಲೆ ನಿನ್ನ ತೋಟದಲ್ಲಿ ಅಡ್ಡಾಡುತ್ತಿರು. ಸೀತೆಯು ಬಂದಿದ್ದಾಳಲ್ಲವೆ? ಅವಳೊಬ್ಬಳೆ ಹೋಗಲಿ."

ಪ್ರತ್ಯುತ್ತರ ಯೋಚಿಸಲು ಲೀಲೆಗೆ ಸಮಯ ಬೇಕಾಗಿರಲಿಲ್ಲ. "ಅಮ್ಮಾ, ಅಕ್ಕನೊಬ್ಬಳೇ ಹೋಗಲಿಕ್ಕೆ ನನ್ನ ಆಕ್ಷೇಪವಿದೆಯೆ? ಪಾಪ! ಕಾವೇರತ್ತೆಯ ಮನೆಯೆಲ್ಲೆಂದು ಅಕ್ಕನಿಗೆ ಗೊತ್ತಿರಲಿಕ್ಕಿಲ್ಲ. ಒಂದು ವೇಳೆ ಇಂತಹ ಕಡೆಯಲ್ಲೆ ಎಂದು ನಾವು ತಿಳಿಸಿದರೆ, ಇವಳು ಅಲ್ಲಿಗೆ ಹೋದಾಳೆಂದು ನೆನಸೋಣ. ಅವರ ಮನೆಯ ಹೊರಗೆ ಗಂಟೆಗಟ್ಲೆ ನಿಂತಾಳೇ ವಿನಾ ಒಳಗೆಹೋಗಿ ಮಾತಾಡುವವಳು ಇವಳಲ್ಲ. ಇವಳಿಗೆ ಮಾತು ಸ್ವಲ್ಪ ಕಡಿಮೆ. ಇಷ್ಟನ್ನೆಲ್ಲಾ ನಾನು ಆಲೋಚಿಸಿಯೇ ಇಂದು ಇವಳೊಡನೆ ಹೊರಟಿದ್ದೇನೆ. ಇವಳನ್ನು ಅಲ್ಲಿಗೆ ಕರೆದುಕೊಂಡು ಹೋಗಿ, ಇವಳನ್ನೂ ಕಾವೇರತ್ತೆಯನ್ನೂ ಸ್ನೇಹವೆಂಬ ಹಗ್ಗದಿಂದ ಕಟ್ಟಿ ಹಿಂದಿರುಗಿದೆನೆಂದರೆ ನನ್ನ ಕರ್ತವ್ಯಭಾರವು ಮುಗಿಯಿತು. ಆ ಮೇಲೆ ಕಾವೇರತ್ತೆಯ ಮನೆಗೇಕೆ? ಅಜ್ಜರಕಾಡಿನಲ್ಲೂ ನಾನು ಸುಳಿದಾಡುವುದಿಲ್ಲವೆಂದು ನೀನು ದೃಢವಾಗಿ ನಂಬಬಹುದು. ಇದು ನಿಮ್ಮ ಮನಸ್ಸಿಗೆ ಬಾರದಿದ್ದರೆ, ನಾನು ಹೀಗೆ ಮಾಡುವುದು ಅನಗತ್ಯವೆಂದು ನೀವು ಅಭಿಪ್ರಾಯ ಪಡುವುದಾದರೆ ನನಗೆ ನನ್ನ ಉದ್ಯಾನವನಕ್ಕೆ ಹೋಗಲು ಅನುಮತಿಕೊಡಿ. ಇಷ್ಟು ದಿನ ಬೆಳಗ್ಗೆ ನೀರು ಹಾಕಬೇಕಾಗಿದ್ದುದರಿಂದ ನನ್ನ ಓದಿಗೆ ಸ್ವಲ್ಪ ಭಂಗಬಂದಿತ್ತು. ಇನ್ನು ಗಿಡಗಳಿಗೆ ಸಾಯಂಕಾಲ ನೀರೆರೆಯ ತೊಡಗಿ ಪ್ರಾತಃಕಾಲ ಚೆನ್ನಾಗಿ ಓದುವೆನು. ಅಕ್ಕಾ, ಹೊರಟು ಹೋಗು. ಇನ್ನು ನಿತ್ಯವೂ ಕಾವೇರತ್ತೆಯ ಮನೆಗೆ ಹೋಗುವ 'ಜವಾಬ್ದಾರಿ' ನಿನ್ನದು."

ಚಂದ್ರಭಾಗಮ್ಮನು ಲೀಲೆಯನ್ನಾಲಿಂಗಿಸಿ "ನನ್ನ ಮುದ್ದು ಲೀಲೆ! ಮಾತಾಡುವುದರಲ್ಲಿ ನೀನೆಷ್ಟು ಚತುರೆಯು! ಈ ವಿದ್ಯೆಯನ್ನು ನೀನೆಲ್ಲಿ ಕಲಿತೆ? ಸೀತೆ, ಗೋವಿಂದ ಮಾಸ್ತರರು ಇಲ್ಲಿಗೆ ಬಂದಾಗ ಇವಳು ಕಷ್ಟ ಕಂಡ ಲೆಕ್ಕಗಳನ್ನೂ ಪಾಠಗಳನ್ನೂ ಅವರೊಡನೆ ಕೇಳುತ್ತಿದ್ದಳು. ಒಮ್ಮೊಮ್ಮೆ ಪಾಠವನ್ನೆಲ್ಲ ಬಿಟ್ಟು, ಇವರಿಬ್ಬರೂ ಯಾವುದಾದರೂ ವಿಷಯ ವನ್ನೆತ್ತಿಕೊಂಡು ವಾದಮಾಡುತ್ತಿದ್ದರು. ಎಲ್ಲವನ್ನೂ ತಿಳಿದ ಗೋವಿಂದ ಮಾಸ್ತರರೂ ಕೂಡ ಎಷ್ಟೊ ಸಲ ಇವಳೊಡನೆ ಚರ್ಚಿಸಿ ಪರಾಜಯ ವನ್ನೊಪ್ಪಿರುವರು ಏನೂ ಅರಿಯದ ನನ್ನ ಗತಿಯೇನು? ಲೀಲೆ, ನಾನು ವಿನೋದಕ್ಕೆಂದು ಹೇಳಿದುದನ್ನೆಲ್ಲಾ ನೀನು ದಿಟವೆಂದು ಭಾವಿಸಿ ದೆಯಾ? ಕಾವೇರಮ್ಮನು ಐಶ್ವರ್ಯದಲ್ಲಿ ನಮಗಿಂತ ದೊಡ್ಡವಳಾದ ರೇನಾಯಿತು? ನಿನ್ನಂತಹ ಸೊಸೆಯು ಸಿಗಬೇಕಾದರೆ ಆಕೆಯು ಪೂರ್ವ ಪುಣ್ಯಮಾಡಿರಬೇಕು, ಕಂಡೆಯಾ! ನೀನು ಅವರ ಮನೆಗೆಂದಿಗೂ ಹೋಗ ದಿರಬೇಡ. ನೀವಿಬ್ಬರೂ ನಿತ್ಯವೂ ಅಲ್ಲಿಗೆ ಹೋಗಿ ಬರಬೇಕೆಂದೆ ನನ್ನಿಚ್ಛೆ. ಸರಿ! ನಿನಗೊಂದು ಮಾತು ಹೇಳಲು ಮರೆತಿದ್ದೆ. ವೆಂಕಟ್ರಾಯರ ಸಾವಿತ್ರಿ ಇದ್ದಾಳಲ್ಲ, ಅವಳ ಕಿವಿಗೆ 'ಲೋಲಾಕು' ಉಂಟಲ್ಲವೆ? ಅಂತಹ ಲೋಲಾ ಕನ್ನೆ ನಿನಗೂ ಮಾಡಿಸಬೇಕೆಂದು ನನಗಾಸೆಯಾಯಿತು. ಅದನ್ನು ಮಾಡಿ ಸಲು ಕೊಟ್ಟಿದ್ದೇನೆ. ಗೋವಿಂದ ಮಾಸ್ತರರು ಈ ದಿನ ಸಾಯಂಕಾಲ ಬರುವಾಗ ತರುತ್ತೇನೆಂದು ಹೇಳಿದ್ದರು. ಅದು ಬಹುಶಃ ಪೂರ್ಣ ಮುಗಿ ದಿಲ್ಲ. ಇನ್ನುಳಿದ ಕೆಲಸವನ್ನು ಮಾಡಿಸಿ ತರಬೇಕೆಂದು ಅವರು ಅಕ್ಕಸಾಲಿ ಗರಲ್ಲಿಗೆ ಹೋಗಿರಬಹುದು. ಅವರು ಇಷ್ಟರವರೆಗೂ ಬಾರದಿರುವುದು ಆ ಕಾರಣದಿಂದಾಗಿರಬೇಕು ಇನ್ನು ನೀವು ಕಾವೇರಮ್ಮನ ಮನೆಗೆ ಹೋಗಿ ಬನ್ನಿ" ಎಂದು ಹೇಳಿ ಅವರಿಬ್ಬರನ್ನು ಕಳುಹಿಸಿಕೊಟ್ಟಳು.

---

## ೪

ಮಾರುದಿನ ಸಾಯಂಕಾಲ ಗೋವಿಂದರಾಯರು ಬಂದಾಗ ಚಂದ್ರಭಾಗ ಮ್ಮನು ಹಾಲು ಕರೆಯಲು ಹೋಗಿದ್ದಳು. ಸೀತೆ ಮತ್ತು ಲೀಲೆ ಯಾವುದೊ

ವಿಷಯವನ್ನು ಕುರಿತು ವಾದಿಸುತ್ತಿದ್ದರು. ಲೀಲೆಯು ಕೊಟ್ಟ ಆಸನವನ್ನು ಮಾಸ್ಟರರು ಅಲಂಕರಿಸಿ, ಸೀತೆಯನ್ನುದ್ದೇಶಿಸಿ, "ನೀವು ನಿನ್ನೆ ಬಂದಿದ್ದೀರೆಂದು ಕೇಳಿದೆ. ನಾನು ಈ ದಿನ ಬೇಗ ಬರಬೇಕೆಂದು ಹೇಳಿದ್ದಿರಂತೆ. ನನ್ನಿಂದಾಗಬೇಕಾದುದೇನಾದರೂ ಇದ್ದರೆ ನಿರ್ದಾಕ್ಷಿಣ್ಯವಾಗಿ ಹೇಳಬೇಕು" ಎಂದು ಮಾತು ಪ್ರಾರಂಭಿಸಿದರು.

"ಮಾಸ್ಟರರೇ, ನಾನು ನಿಮಗಿಂತಲೂ ಎಷ್ಟೋ ಸಣ್ಣವಳು. ನನ್ನನ್ನು ಏಕವಚನದಲ್ಲಿ ಸಂಬೋಧಿಸುವ ಕೃಪೆಮಾಡಬೇಕು. ನೀವು ಬೇಗ ಬರಬೇಕಾಗಿ ನಾನು ಅಪೇಕ್ಷಿಸುವೆನೆಂದು ನಿಮಗೆ ತಿಳಿಸುವಂತೆ ಲೀಲೆಯು ಅಮ್ಮನೊಡನೆ ಹೇಳಿಟ್ಟಿದ್ದಳು. ನಮ್ಮ ಲೀಲೆಯ ಅಸೌಖ್ಯದ ಸಮಯದಲ್ಲಿ ನೀವು ಪಟ್ಟ ಶ್ರಮಕ್ಕೂ ಅವಳನ್ನು ನೀವು ಬದುಕಿಸಿಕೊಟ್ಟುದಕ್ಕೂ ನಾನು ತುಂಬಾ ಕೃತಜ್ಞಳಾಗಿರುವೆನು." ಸೀತೆಯು ವಿನಯಪೂರ್ವಕವಾಗಿ ಹೇಳಿದಳು.

"ಛೆ! ಛೆ! ನಾನು ಯಾವುದೋ ಮಹತ್ಕಾರ್ಯ ಮಾಡಿದೆನೆಂದು ನನಗೆ ಭ್ರಾಂತಿಯುಂಟುಮಾಡಲು ನೀವೆಲ್ಲರೂ ಪ್ರಯತ್ನಿಸಿರುವಂತಿದೆ. ನಾನು ಮಾಡಿದುದಾದರೂ ಏನು? ಅಂದು ನಿನ್ನ ತಾಯಿಯನ್ನು ದವಾಖಾನೆಯಲ್ಲಿ ನೋಡಿದರೆ ಎಂತಹ ಕಲ್ಲೆದೆಯೂ ನೀರಾಗುತಿತ್ತು. ನಾನು ಮಾತನಾಡಿಸಲು ಅವಳ ದುಃಖಪ್ರವಾಹವು ಕಟ್ಟೊಡೆದು ಹರಿಯಲಾರಂಭಿಸಿತು. ಇಂತಹರಿಗೆ ನನ್ನಿಂದಾದಷ್ಟು ಸಹಾಯಮಾಡದಿದ್ದರೆ ನನ್ನ ಜನ್ಮವು ವ್ಯರ್ಥವೆಂದು ತೋರಿ ನನ್ನ ಕರ್ತವ್ಯವೆಂದೇ ಭಾವಿಸಿ ಒಂದೆರಡು ಕೆಲಸಗಳನ್ನು ಮಾಡಿದ ಮಾತ್ರಕ್ಕೆ, ನಾನು ನಿಮ್ಮ ಮೇಲೆ ಉಪಕಾರದ ಹೊರೆ ಹೇರಿದಂತಾಗಲಿಲ್ಲ. ಮುಚ್ಚುಮರೆಯಿಲ್ಲದೆ ಹೇಳುವುದಾದರೆ ನಿಮ್ಮಂತಹ ಸಜ್ಜನರ ಸಹವಾಸವು ನನಗೆ ದೊರೆತುದು ನನ್ನ ಪೂರ್ವಪುಣ್ಯವೆಂದೆ ಭಾವಿಸಬೇಕು. ಅದರಲ್ಲೂ ವಾದಿಸುವುದರಲ್ಲಿ ಲೀಲೆಯಂತಹ ಪ್ರತಿಸ್ಪರ್ಧಿಯು ಸಿಕ್ಕಿದುದು ನನ್ನ ಸುಕೃತವು. ಬಾಲ್ಯದಿಂದಲೂ ನನಗೆ ವಾದವೆಂದರೆ ಇಷ್ಟ. ನನ್ನ ಮಿತ್ರರೊಡನೆ ವಾದಿಸುವುದರಿಂದ ನನಗೆ ತೃಪ್ತಿಯಿಲ್ಲ; ಏಕೆಂದರೆ, ಯಾವುದಾದ

ರೊಂದು ಚರ್ಚಾಸ್ಪದವಾದ ವಿಷಯದಲ್ಲಿ ನನ್ನಭಿಪ್ರಾಯವನ್ನು ಹೇಳಿದೆ ನೆಂದರೆ ಅವರು ನನ್ನ ಮಾತನ್ನು ವೇದವಾಕ್ಯವೆಂದು ಭಾವಿಸಿ ಒಪ್ಪುವರು. ಇದರಿಂದಾಗಿ ನಾನು ನನ್ನ ಮತವನ್ನು ಸಮರ್ಥಿಸಲಿಕ್ಕೆಂದು ತಯಾರಿಸಿದ ಅಸ್ತ್ರಗಳೆಲ್ಲವೂ ಬತ್ತಳಿಕೆಯಲ್ಲೆ ಉಳಿಯುವುವು. ನನ್ನ ಮತವನ್ನು ಎಲ್ಲರೂ ಮನ್ನಿಸಿದರೆಂಬ ಕ್ಷಣಿಕಸುಖವನ್ನು ನಾನು ಅನುಭವಿಸಬಹುದು, ಅಷ್ಟೆ. ವಾದವನ್ನು ತಪ್ಪಿಸಿಕೊಳ್ಳಬೇಕೆಂಬ ಒಂದು ಉದ್ದೇಶದಿಂದಲೆ ನನ್ನ ಮಿತ್ರರು ಒಪ್ಪಿದಂತೆ ತೋರಿಸಿಕೊಳ್ಳುವರೇ ವಿನಾ ಸ್ವಬುದ್ಧಿಯನ್ನುಪಯೋಗಿಸಿ ಸರಿ ಯೆಂದು ಕಂಡ ಮೇಲಲ್ಲ. ಆದರೆ ಲೀಲೆಯೊಡನೆ ವಾದಿಸುವುದು ಸುಲಭ ವಲ್ಲ. ಚರ್ಚೆಗೆ ಅವಕಾಶವಿಲ್ಲವೆಂದು ನನಗೆ ತೋರಿದ ಎಷ್ಟೋ ವಿಷಯ ಗಳಲ್ಲಿ ನನ್ನ ಮತವನ್ನು ಇವಳು ಖಂಡಿಸಿರುವಳು; ತರ್ಕದಲ್ಲಿ ನನ್ನ ಅಕ್ಷಯ ಬತ್ತಳಿಕೆಯೂ ಬರಿದಾಗಿ, ನಾನು ಹಲವು ಬಾರಿ ಸೋಲನ್ನೊಪ್ಪಿರು ವೆನು. ಇಂತಹ ಚರ್ಚೆಯಿಂದಾಗಿ ಸತ್ಯದ ತಿರುಳು ಹೊರಬೀಳುವುದು. ನನ್ನ ಪ್ರೀತಿಯ ಸವಿಯೂಟವನ್ನು ಲೀಲೆಯು ಈ ರೀತಿಯಲ್ಲಿ ನಿತ್ಯವೂ ಬಡಿಸುತ್ತಿರುವಳು. ಇದರಿದಿರಲ್ಲಿ ನಾನು ಮಾಡಿದೆನೆಂದು ಹೇಳುವ ಉಪ ಕಾರವೂ ಹೊಂದಿದೆನೆಂದು ಹೇಳುವ ಶ್ರಮವೂ ತೃಣಮಾತ್ರ!"

ಲೀಲೆಯು "ಗೋವಿಂದಣ್ಣಾ, ಸುಮ್ಮನೆ ಹಾಗೆ ಹೇಳಬೇಡಿ. ಅಂದು ನೀವು ಅಮ್ಮನನ್ನು ಸಂತೈಸಿ ದವಾಖಾನೆಯಿಂದ ಹಿಂದೆ ಕಳುಹಿಸಿದಾಗ, ನನಗೆ ಜ್ವರವು ತಲೆಗೇರಿ ನಾನು ತುಂಬಾ ಬಡಬಡಿಸುತಿದ್ದೆನಂತೆ; ಬಾಯಾರಿ ನನ್ನ ತುಟಿಯೊಣಗಿದ್ದಿತಂತೆ; ಅಮ್ಮನು ಬರಲು ಸ್ವಲ್ಪ ತಡವಾಗಿದ್ದರೆ ಏನಾ ದೀತೆಂದು ಹೇಳಲಾಗುತಿದ್ದಿಲ್ಲವಂತೆ! ಅಮ್ಮನು ನನಗೆ ಸ್ವಲ್ಪ ನೀರು ಕುಡಿಸಿ, ಒದ್ದೆ ಬಟ್ಟೆಯನ್ನು ತಲೆಯ ಮೇಲಿಟ್ಟಳಂತೆ. ನೀವು ಹಲವು ರಾತ್ರಿ ನಿದ್ದೆ ಬಿಟ್ಟು ನನ್ನ ಹಾಸಿಗೆಯ ಪಕ್ಕದಲ್ಲಿ ಕುಳಿತು ಗಂಟೆಗಂಟೆಗೂ ಮದ್ದು ಕುಡಿಸುತಿದ್ದುದು ನನಗೆ ನೆನಪಿದೆ. 'ನರ್ಸ ಕುಲತಿಲಕ' ಎಂಬ ಬಿರುದನ್ನು ನಿಮಗೆ ಪುಕ್ಕಟೆ ಕೊಟ್ಟೆನೆಂದು ತಿಳಿದಿರೇ? ಇನ್ನು ನಮ್ಮಿಬ್ಬರ ವಿವಾದವನ್ನು ಇತ್ಯರ್ಥಿಸಬೇಕು. ನೀವಿಲ್ಲಿಗೆ ಬರುವಾಗ ನಾವಿಬ್ಬರೂ ಚರ್ಚಿಸುತಿದ್ದ

ವಿಷಯುವೆಂದರೆ, ದೇಶೀಯ ಭಾಷೆಗಳಲ್ಲಿ ಪಾಠಗಳನ್ನು ಕಲಿಸಬೇಕೆಂದು ಸರಕಾರದವರು ಇತ್ತೀಚೆ ಆಚರಣೆಗೆ ತಂದ ಸುಧಾರಣೆ. ಇದು ಒಳ್ಳೆಯದು, ವಿದ್ಯಾರ್ಥಿಗಳಿಗೆ ಕಲಿಯಬೇಕಾದ ವಿಷಯವು ಸುಲಭವಾಗಿ ತಿಳಿಯುವುದು ಎಂದು ನನ್ನಭಿಪ್ರಾಯ. ಉಚ್ಚ ವಿದ್ಯಾಭ್ಯಾಸಕ್ಕೆ ಹೋಗುವವರಿಗೆ ಇದರಿಂದ ತೊಡಕಾಗುವುದರಿಂದ ಈ ಸುಧಾರಣೆಯು ಒಳ್ಳೆಯದಲ್ಲವೆಂದು ಅಕ್ಕನ ಅಭಿಪ್ರಾಯ. ನೀವು ಹೇಳುವುದೇನು?" ಎಂದು ಕೇಳಿದಳು.

ಗೋವಿಂದರಾಯರು ಈ ಪ್ರಶ್ನೆಗೆ ಹೆಚ್ಚಿನ ಗಮನಕೊಟ್ಟಿದ್ದರು. "ಇಲ್ಲಿ ಮಾತೃಭಾಷೆಯಲ್ಲಿ ಎಲ್ಲ ಪಾಠಗಳನ್ನೂ ಕಲಿತರೆ, ಕೊಲೇಜಿಗೆ ಹೋದ ಮೇಲೆ ವಿದ್ಯಾರ್ಥಿಗಳಿಗೆ ಸ್ವಲ್ಪ ಕಷ್ಟವಾಗಬಹುದು. ಉಚ್ಚ ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡ್ ಮೊದಲಾದ ಪರದೇಶಗಳಿಗೆ ಹೋಗುವವರಿಗೆ ಇಂಗ್ಲಿಷಿನಲ್ಲಿ ಎಲ್ಲವನ್ನೂ ಕಲಿಯಲು ಪ್ರಯಾಸವಾಗುವುದು ನಿಶ್ಚಯ. ಆದರೆ ಹೀಗೆ ಉಚ್ಚ ವಿದ್ಯಾಭ್ಯಾಸಕ್ಕೆ ಹೋಗುವವರು ಬಹಳ ಸ್ವಲ್ಪ ಮಂದಿ. ಈ ಅಲ್ಪಸಂಖ್ಯಾಕರ ಸೌಕರ್ಯಕ್ಕೋಸುಗ ಅಸಂಖ್ಯಾತ ವಿದ್ಯಾರ್ಥಿಗಳು ಕಷ್ಟಪಟ್ಟು ಆ ಪರಕೀಯ ಭಾಷೆಯೊಂದಿಗೆ ನಿರಂತರವೂ ಒದ್ದಾಡಬೇಕೆಂದರೆ ಅದು ಸಮಂಜಸವೆನಿಸದು. ನಾನು ನನ್ನ ಅನುಭವದಿಂದ ಹೇಳುತ್ತೇನೆ. ಹಿಂದೆ ಎಲ್ಲ ವಿಷಯಗಳನ್ನೂ ಇಂಗ್ಲಿಷಿನಲ್ಲೆ ಕಲಿಸಬೇಕಾಗಿದ್ದಾಗ, ನಾವೆಷ್ಟು ಕಷ್ಟಪಟ್ಟರೂ ವಿದ್ಯಾರ್ಥಿಗಳು ಸುಲಭವಾಗಿ ಗ್ರಹಿಸುತ್ತಿರಲಿಲ್ಲ. ಈಗ ನಾವು ಹೆಚ್ಚಿನ ಶ್ರಮಹೊಂದಬೇಕಾಗಿಲ್ಲ. ಯಾವ ವಿಷಯವನ್ನಾದರೂ ಕನ್ನಡ ಭಾಷೆಯಲ್ಲಿ ಒಮ್ಮೆ ಹೇಳಿದರೆ ವಿದ್ಯಾರ್ಥಿಗಳಿಗೆ ಅದು ಸರಿಯಾಗಿ ತಿಳಿಯುವುದು. ಹಿಂದೆ ಸ್ವಲ್ಪ ಕಷ್ಟವಾದ ಭಾಗಗಳನ್ನು ಅವರು ಬಾಯಿಪಾಠ ಮಾಡಿಕೊಳ್ಳುತಿದ್ದರು. ಉತ್ತರ ಪತ್ರಗಳನ್ನು ತಿದ್ದುವಾಗ, ವಿದ್ಯಾರ್ಥಿಗಳಿಗೆ ಆ ವಿಷಯವು ತಿಳಿದಿದೆಯಾದರೂ ಇಂಗ್ಲಿಷಿನಲ್ಲಿ ಅದನ್ನು ಸರಿಯಾಗಿ ಬರೆಯಲು ಅಸಮರ್ಥರಾದುದರಿಂದ ಅವರು ತಪ್ಪು ತಪ್ಪು ಬರೆಯುತಿದ್ದರೆಂದು ನನಗೆ ತೋರಿರುವುದು. ಆದುದರಿಂದ ಈ ಸುಧಾರಣೆಯಿಂದಾಗಿ ಒಬ್ಬಿಬ್ಬರಿಗೆ ಅನನುಕೂಲತೆಯಾದರೆ ಇಡೀ ದೇಶಕ್ಕೆ ಇದರಿಂದ ಪ್ರಯೋಜನವಿದೆಯೆಂದು ನನ್ನ ನಂಬುಗೆ.

ಈ ಒಂದು ಸಂಗತಿಯಲ್ಲಿ ಮಾತ್ರ ನಾನು ಚರ್ಚೆಯಿಲ್ಲದೆ ಲೀಲೆಯ ಅಭಿಪ್ರಾಯವನ್ನು ಸಮರ್ಥಿಸುತ್ತೇನೆ.” ಎನ್ನುವಷ್ಟರಲ್ಲಿ ಒಳಗಿನಿಂದ 'ಗೋವಿಂದಾ' ಎಂಬ ಕರೆ ಬರಲು ಮಾಸ್ತರರು ಒಳಗೆ ಹೋದರು.

ಲೀಲೆಯು “ಅಕ್ಕಾ, ಇದೇ ಏನು ನಿನ್ನ ಉಪಕಾರಸ್ಮರಣೆಯ ಮಾದರಿ? ನೀನು ಉದ್ದ ಭಾಷಣವನ್ನೆ ಮಾಡುವೆಯೆಂದು ನಾನು ನೆನಸಿದ್ದೆ. ಒಂದೆರಡು ಮಾತಿನಲ್ಲೆ ಮುಗಿಸಿಬಿಟ್ಟೆಯಲ್ಲ!” ಎಂದಳು.

“ಲೀಲೆ, ಹೃದಯದಂತರಾಳದಿಂದ ಹೊರಡುವ ಮಾತುಗಳು ಒಂದೆರಡಾದರೂ, ಉದ್ದುದ್ದ ಭಾಷಣಗಳಿಗಿಂತ ಹೆಚ್ಚು ಬೆಲೆಯುಳ್ಳವು.”

“ನಿನ್ನ ಸ್ಥಾನದಲ್ಲಿ ನಾನಿರುತಿದ್ದರೆ ನಾನು ಇಷ್ಟರಲ್ಲೆ ತೃಪ್ತಳಾಗುತ್ತಿರಲಿಲ್ಲ.”

“ನೀನೇನೇನು ಹೇಳುತಿದ್ದೆ?”

“ನಾನಾದರೆ 'ಗೋವಿಂದರಾಯರೇ, ನನ್ನ ಭಗಿನಿಯನ್ನು ಬದುಕಿಸಿ ಕೊಟ್ಟುದಕ್ಕಾಗಿ ನಾನು ನಿಮಗೆ ಬಹಳ ಋಣಿಯಾಗಿರುವೆನು. ಈ ಋಣವನ್ನು ಏಳೇಳು ಜನ್ಮಗಳಲ್ಲಿಯೂ ನನ್ನಿಂದ ಸಲ್ಲಿಸಲಾಗಲಿಕ್ಕಿಲ್ಲ. ನನ್ನ ತಂಗಿಯು ಹುಡುಗಾಟವನ್ನಿನ್ನೂ ಬಿಟ್ಟಿಲ್ಲವಾದರೂ, ಅವಳೆಂದರೆ ನನಗೆ ಪಂಚಪ್ರಾಣ. ನಮ್ಮಿಬ್ಬರ ದೇಹಗಳೆರಡು, ಜೀವವೊಂದೇ ಎಂದು ನಾನು ಹೇಳಿದರೆ ಅದು ಅತಿಶಯೋಕ್ತಿಯೆನಿಸದು. ನನ್ನ ಏಕಮಾತ್ರ ಭಗಿನಿಯನ್ನು ಕಳೆದುಕೊಂಡ ಮೇಲೆ ನನ್ನಿಂದ ಖಂಡಿತ ಜೀವಿಸಲಾಗುತ್ತಿರಲಿಲ್ಲ. ನಿರುಪಮ ಸುಂದರಿಯೂ, ಸದ್ಗುಣವಿಭೂಷಿತೆಯೂ, ಆಟಪಾಟಗಳಲ್ಲಿ ಅತಿ ನಿಪುಣೆಯೂ, ಇಡೀ ದಿನ ಹುಚ್ಚುಹುಚ್ಚು ಮಾತನಾಡುವುದರಲ್ಲಿ ಅದ್ವಿತೀಯಳೂ ಆಗಿರುವ ಲೀಲೆಯು ಪೂರ್ವಪುಣ್ಯದಿಂದಲೆ ನನಗೆ ಸಹೋದರಿಯಾಗಿ ದೊರೆತಿರುವಳು. ಅಂತಹಳು ನನ್ನನ್ನು ಬಿಟ್ಟು ಹೋಗುವುದರಲ್ಲಿದ್ದಾಗ, ಯಮದೂತರೊಡನೆ ಖಾಡಾಖಾಡಿ ಯುದ್ಧಮಾಡಿ, ವಿಜಯಶ್ರೀಯನ್ನೊಲಿಸಿಕೊಂಡು, ನನ್ನ ತಂಗಿಯನ್ನು ಬದುಕಿಸಿ, ನನಗೆ ಮಾಡಿದ ಉಪಕಾರದ ಮಹತ್ವವನ್ನು ಎರಡು ಸಾವಿರ ನಾಲಗೆಯುಳ್ಳ ಮಹಾ

ಶೇಷನಿಂದಲೂ ಬಣ್ಣಿಸಲಸದಳ!' ಎಂದು ಇದೇ ಧಾಟಿಯಲ್ಲಿ ಏನಿಲ್ಲೆಂದರೂ ಒಂದರ್ಧ ಗಂಟೆಯ ಭಾಷಣವನ್ನಾದರೂ ಮಾಡುತಿದ್ದೆ."

*  *  *  *  *

ಪ್ರಥಮ ದರ್ಶನದಲ್ಲೆ ಸೀತೆಗೆ ಗೋವಿಂದರಾಯರಲ್ಲಿ ಪೂಜ್ಯ ಬುದ್ಧಿಯು ಅಂಕುರಿಸಿತ್ತು. ಅವರೊಡನೆ ಸಹವಾಸವು ಹೆಚ್ಚಿದಂತೆಲ್ಲ ಅವರ ಅಗಾಧ ಪಾಂಡಿತ್ಯ, ಕೋಮಲ ಹೃದಯ, ಸರಳ ಭಾವಗಳನ್ನು ಕಂಡು ಅವರ ಸಹವಾಸವು ತನಗೆ ಲಭಿಸಿದುದಕ್ಕಾಗಿ ಅವಳು ಬಹಳ ಸಂತೋಷಿಸಿದಳು.

ಧರ್ಮದ ಹೆಸರಿನಲ್ಲಿ ಅನೇಕ ಅತ್ಯಾಚಾರ, ಅನಾಚಾರಗಳು ನಡೆಯುವುದನ್ನು ಕಂಡು ಇಬ್ಬರೂ ಮರುಗುತಿದ್ದರು. ಇವೆಲ್ಲ ಮರೆಯಾಗಿ ಎಂದಿಗೆ ಧರ್ಮವು ಉಜ್ಜ್ವಲವಾಗಿ ಮೆರೆದೀತೆಂದು ಆ ದಿನವನ್ನೆ ಇಬ್ಬರೂ ಹಾರೈಸುತಿದ್ದರು. ಸಮಾಜದಲ್ಲಿ ನೆಲಸಿರುವ ಎಷ್ಟೊ ಹಾಳು ರೂಢಿಗಳನ್ನು ಕಿತ್ತೊಗೆಯಲು ಅವರಿಬ್ಬರೂ ಬದ್ಧಕಂಕಣರಾದರು. ಸುಧಾರಣೆಗಳನ್ನು ಪ್ರಚಾರಕ್ಕೆ ತಂದು ಸಮಾಜಸೇವೆ ಮಾಡುವುದರಲ್ಲಿ ತಮ್ಮ ತನುಮನಧನಗಳನ್ನು ವಿನಿಯೋಗಿಸಬೇಕೆಂದೂ ಅವರು ನಿರ್ಧರಿಸಿದರು.

---

## ೫

ಅಜ್ಜರಕಾಡೆಂದರೆ ಉಡುಪಿಯ 'ಮಲಬಾರ್ ಹಿಲ್'. ಅಜ್ಜರಕಾಡಿನ ನಿವಾಸಿಗಳಲ್ಲಿ ಹೆಚ್ಚಿನವರು ಸುಶಿಕ್ಷಿತರು; ಸುಸಂಸ್ಕೃತರು; ಸುಸಂಪನ್ನರು. ಸಂತೆಪೇಟೆಗಳ ಗೊಂದಲವಿಲ್ಲದ ಕಾರಣ ವಾಸಮಾಡಲು ಇದು ಆದರ್ಶ ಸ್ಥಾನವಾಗಿದೆ. ಮನೆಗಳು ಒತ್ತೊತ್ತಾಗಿಲ್ಲದಿರುವುದರಿಂದ ಶುದ್ಧವಾದ ಗಾಳಿಯು ಸುಳಿದಾಡಲು ಅನುಕೂಲವಿದೆ.

ಅಜ್ಜರಕಾಡಿನಿಂದ ಪೇಟೆಯು ವಿಶೇಷ ದೂರವಿಲ್ಲ. ಶಾಲೆಗಳೂ ಸಮೀಪ. ಕೋರ್ಟು ಕಚೇರಿಗಳೂ ಅನತಿದೂರದಲ್ಲೆ ಇವೆ.

ಸಾಯಂಕಾಲದಲ್ಲಿ ಜಾತಿಮತಲಿಂಗಭೇದವಿಲ್ಲದೆ ಪಟ್ಟಣಿಗರನ್ನು ಸ್ವಾಗತಿಸಿ, ಅನೇಕಾನೇಕ ಸಣ್ಣ ಮಕ್ಕಳ ಬಾಲಲೀಲೆಯನ್ನೂ ವ್ಯಾಯಾಮದಲ್ಲಿ ನಿಪುಣರಾದ ವಿದ್ಯಾರ್ಥಿಗಳ ಕುಸ್ತಿಗಳನ್ನೂ ಸೂರ್ಯಾಸ್ತಮಯದ ಸೊಬಗನ್ನೂ ತೋರಿಸಿ, ಪ್ರೇಕ್ಷಕರ ಕಣ್ಮನಗಳನ್ನಪಹರಿಸಿ, ಕರ್ಣಪೀಯೂಷದಂತಿರುವ 'ಭುಜಂಗವಾಣಿ'ಯಿಂದ ಶ್ರಾವಕರನ್ನು ಮುಗ್ಧಗೊಳಿಸುವ 'ಗಾಂಧಿ ಮೈದಾನು' ಇರುವುದು ಅಜ್ಜರಕಾಡಿನಲ್ಲೆ! ಸುಶಿಕ್ಷಿತ ಯುವಕರ ಭ್ರಾತೃಸಮಾಜವು ಶಿಲೆಯ ಮೇಲೆ ವರ್ತುಲಾಕಾರವಾಗಿ ಕುಳಿತು, ಸಾಮಾಜಿಕ ಹಾಗೂ ರಾಜಕೀಯ ವಿಷಯಗಳನ್ನು ಕೂಲಂಕಷವಾಗಿ ಚರ್ಚಿಸಿ, ಕಠಿನ ಸಮಸ್ಯೆಗಳನ್ನು ಬಿಡಿಸಲು ಪ್ರಯತ್ನಿಸಿ, ಕಟ್ಟಕಡೆಗೆ ಒಂದು ನಿರ್ಣಯಕ್ಕೆ ಬಂದು, ಚೆದರುತ್ತಿರುವುದು. ನಿವೃತ್ತರಾದ ಸರಕಾರಿ ಉದ್ಯೋಗಸ್ಥರು ಇನ್ನು ತಮ್ಮ ಸಮಯವನ್ನು ಕಳೆಯಲು ಗೀತಾಧ್ಯಯನವೇ ತಕ್ಕುದೆಂದು ತೀರ್ಮಾನಿಸಿ, ಹಗಲು ಹೊತ್ತಿನಲ್ಲಿ ತಮ್ಮ ತಮ್ಮ ಮನೆಗಳಲ್ಲಿ ಗೀತೆಯನ್ನೂ ವೇದಾಂತ ಗ್ರಂಥಗಳನ್ನೂ ಓದಿ, ಸಂಧ್ಯಾಕಾಲದಲ್ಲಿ ಗಾಂಧಿ ಮೈದಾನಿನಲ್ಲಿ ಒಂದೆಡೆ ಸೇರಿ, ತತ್ತ್ವವಿಚಾರಗಳನ್ನು ಚರ್ಚಿಸಿ, ನಡುನಡುವೆ ಸಂಸ್ಕೃತ ಶ್ಲೋಕಗಳನ್ನುದ್ಧರಿಸುತ್ತ, ಪರಮಾರ್ಥ ಸಾಧನೆಯಲ್ಲಿ ತಮ್ಮ ಶೇಷಾಯುಷ್ಯವನ್ನು ವಿನಿಯೋಗಿಸಲು ಹವಣಿಸುತ್ತಿರುವರು.

ಸಂಕ್ಷೇಪವಾಗಿ ಹೇಳುವುದಾದರೆ ಅಜ್ಜರಕಾಡೆಂದರೆ 'ಪೆನ್ಶನರರ ಭೂಕೈಲಾಸ'

ನಿವೃತ್ತರಾದೊಡನೆ ಗೋಪಾಲರಾಯರು ಉಡುಪಿಗೆ ಬಂದು, ಅಜ್ಜರಕಾಡಿನಲ್ಲಿ ಒಂದು ಮನೆಯನ್ನು ಬಾಡಿಗೆಗೆ ಗೊತ್ತುಮಾಡಿ, ಇರತೊಡಗಿದರು. ಅವರ ಮನೆಯ ಸಮೀಪದಲ್ಲೆ ಒಂದು ಖಾಲಿ ಸ್ಥಳವಿದ್ದಿತು. ಅದನ್ನು 'ದರಖಾಸ್ತಿ'ಗೆ ವಹಿಸಿಕೊಂಡವನಲ್ಲಿ ಮನೆ ಕಟ್ಟಲು ಹಣವಿಲ್ಲದಿದ್ದುದರಿಂದ, ಗೋಪಾಲರಾಯರು ಅವನಿಂದ ಆ ಸ್ಥಳವನ್ನು ಪಡೆಕೊಂಡು, ತಮ್ಮ ಮನಸ್ಸಿಗೊಪ್ಪುವ ಮಾದರಿಯ ಮನೆ ಕಟ್ಟಿಸುತ್ತಿರುವರು.

---

೬

ಪರೀಕ್ಷೆ ಮುಗಿಯುತ್ತಲೆ ಅನಂತನು ಮದರಾಸನ್ನು ಬಿಟ್ಟು ನೇರಾಗಿ ಉಡುಪಿಗೆ ಬಂದನು.

ಉಡುಪಿಯ ವಿಷಯ ಅನೇಕಾವರ್ತಿ ಕೇಳಿದ್ದರೂ, ಅದನ್ನು ನೋಡಿದುದು ಅವನ ನೆನಪಿನಲ್ಲಿಲ್ಲದಿದ್ದ ಕಾರಣ, ಉಡುಪಿಯು ಒಂದು ಸಣ್ಣ ಹಳ್ಳಿಯಂತಿರಬಹುದೆಂದು ಅವನು ಭಾವಿಸಿದ್ದನು. ಅಷ್ಟ ಮಠಗಳಿರುವ ಉಡುಪಿಯು ಕುರುಡುಧರ್ಮ, ಅಂಧಶ್ರದ್ಧೆಗಳಿಂದ ನಿಬಿಡವಾಗಿರಬಹುದೆಂದು ಅವನು ನಂಬಿದ್ದನು. ಸುಖಾಭಿಲಾಷಿಯಾಗಿ, ದೊಡ್ಡ ಪಟ್ಟಣಗಳಲ್ಲಿ ಬಳೆದ ತನಗೆ, ಉಡುಪಿಯಲ್ಲಿ ಕೆಲದಿನ ನಿಂತರೆ, ಬೇಸರವಾಗುವುದು ಖಂಡಿತವೆಂದು ಅವನ ಭಾವನೆಯಾಗಿತ್ತು.

ಆದರೆ ಉಡುಪಿಯ ದರ್ಶನ ಮಾತ್ರದಿಂದಲೆ ಅವನ ತಪ್ಪು ಭಾವನೆಯು ದೂರವಾಯಿತು. ಉಡುಪಿಯು ಇಷ್ಟು ದೊಡ್ಡದಿರಬಹುದೆಂದು ಅವನು ಕನಸಿನಲ್ಲೂ ಎಣಿಸಿರಲಿಲ್ಲ. ಒಂದು ಜಟಕಾಗಾಡಿ ಹತ್ತಿ, ರಿಟಾಯರ್ಡ್ ಸರ್ಕಲ್ ಇನ್‌ಸ್ಪೆಕ್ಟರ್ ಗೋಪಾಲ ರಾಯರಲ್ಲಿಗೆ ಕೊಂಡೊಯ್ಯಲು ಹೇಳಿ, ಮಾರ್ಗದ ಎರಡೂ ಕಡೆ ನೋಡತೊಡಗಿದನು.

ಸಿನೆಮಾ ಥಿಯೇಟರನ್ನು ನೋಡಿದಾಗ ಅವನಿಗೆ ತುಸು ಉಲ್ಲಾಸವಾಯಿತು. ಕ್ಲಬ್ಬಿನಲ್ಲಿ ಟೆನ್ನಿಸ್ ಆಡುವುದನ್ನು ಕಂಡು, ತನ್ನ 'ರೇಕೆಟ್ಟ'ನ್ನು ತಾರದಿದ್ದುದಕ್ಕಾಗಿ ಮನಸ್ಸಿನಲ್ಲೆ ಚಿಂತಿಸಿದನು. ಊರೇನೊ ದೊಡ್ಡದು; ಆದರೆ ಪರಿಚಿತರೊಬ್ಬರೂ ಇಲ್ಲದ ಈ ಊರಿನಲ್ಲಿ ತನ್ನ ಎರಡು ತಿಂಗಳ ರಜೆಯನ್ನು ಹೇಗೆ ಕಳೆಯಲೆಂಬ ಯೋಚನೆಯು ಅವನನ್ನು ಕಾಡತೊಡಗಿತು.

ಅಷ್ಟರಲ್ಲಿ ತನಗೊಬ್ಬ ಸೋದರತ್ತೆಯೂ, ಅವಳಿಗಿಬ್ಬರು ಹುಡುಗಿಯರೂ ಇರುವರೆಂಬುದು ಅವನಿಗೆ ಜ್ಞಾಪಕವಾಯಿತು. ಆ ಹುಡುಗಿಯ

ರಿಬ್ಬರ ಬದಲಿಗೆ ತನ್ನ ಪ್ರಾಯದ ಹುಡುಗನೊಬ್ಬನಿದ್ದರೆ, ತನಗೊಬ್ಬ ಸ್ನೇಹಿತನು ಸಿಗುತ್ತಿದ್ದನು; ಆದರೆ ಹುಡುಗಿಯರ ಸಂಗಡ, ಅದರಲ್ಲೂ ಹಳೇ ಸಂಪ್ರದಾಯಕ್ಕೆ ತವರುಮನೆಯಾಗಿರಬಹುದಾದ ಈ ಊರಿನಲ್ಲಿ ಹುಡುಗಿಯರ ಸಂಗಡ ಮಾತನಾಡುವುದು ಕೂಡ ಕಷ್ಟವೆಂದೆನಿಸಿತು ಅವನಿಗೆ.

ಸೋದರತ್ತೆಯ ಹುಡುಗಿಯರ ರೂಪವನ್ನು ಅವನು ಭಾವನಾ ಪ್ರಪಂಚದಲ್ಲಿ ಚಿತ್ರಿಸತೊಡಗಿದನು. ಮದರಾಸಿನ ಸಮುದ್ರ ತೀರದಲ್ಲಿ ವಾಯುಸೇವನೆಗಾಗಿ ಬರುತ್ತಿದ್ದ ಸುಂದರಿಯರಾದ ಇಬ್ಬರು ಸಹೋದರಿಯರ ರೂಪವು ಸಹಜವಾಗಿ ಅವನ ಕಣ್ಣೆದಿರು ನಿಂತಂತಾಯಿತು. ಹಿರಿಯಳಿಗೆ ಸುಮಾರು ಇಪ್ಪತ್ತು ವರ್ಷ. ಬಳುಕುವ ಸುಕುಮಾರ ದೇಹ, ಚಂದ್ರನನ್ನು ಧಿಕ್ಕರಿಸುವ ಮುಖಮಂಡಲ, ಕಣ್ಣಿಗೆ ಕನ್ನಡಕ, ಮಣಿಗಂಟಿಗೆ ಚಿಕ್ಕ ಗಡಿಯಾರ, ಕಾಲಿಗೆ ಎತ್ತರವಾದ ಹಿಮ್ಮಡಿಯ ಪಾದರಕ್ಷೆ. ಕಿರಿಯಳಿಗೆ ಸುಮಾರು ಹದಿನೇಳು ವರ್ಷ. ನೋಡಲು ಸಿನೆಮಾ ನಟಿಯಂತೆ. ಕಿವಿಗೆ ವಜ್ರದ ಲೋಲಾಕು, ಸದಾ ನಗುಮೊಗ. ಅವರಿಬ್ಬರಲ್ಲಿ ಯಾರನ್ನಾದರೂ ವರಿಸಿದರೆ, ತನ್ನ ಜನ್ಮವು ಸಾರ್ಥಕವೆಂದು ಅವನು ಬಗೆದಿದ್ದನು. ಆದರೆ ಅವರ ಜಾತಿ-ನೀತಿ ಗೊತ್ತಿರದಿದ್ದುದು ವಿಷಾದಕರವಾದ ಸಂಗತಿಯಾಗಿತ್ತು. ತನ್ನ ಸೋದರತ್ತೆಯ ಹುಡುಗಿಯರು ಕಡಲತಡಿಯ ಆ ಬೆಡಗಿಯರಂತಿದ್ದು, ಅವರಲ್ಲೊಬ್ಬಳನ್ನು ತಾನು ವಿವಾಹವಾಗುವುದಾದರೆ, 'ಸ್ವರ್ಗಕ್ಕೆ ಕಿಚ್ಚು ಹಚ್ಚು' ಎಂದುಹೇಳಲಿಕ್ಕೂ ಅವನು ಹಿಂಜರಿಯುತ್ತಿದ್ದಿಲ್ಲ. ಆದರೆ, ಗೊಡ್ಡು ವೈದಿಕರ ವಾತಾವರಣದಲ್ಲಿ ಬೆಳೆದ ಈ ಹುಡುಗಿಯರು 'ಫೇಶನ್' ಎಂದರೇನೆಂಬುದನ್ನರಿಯದೆ, ಕುರೂಪಿಗಳಾಗಿದ್ದು, ಅವರಲ್ಲೊಬ್ಬಳನ್ನು ವರಿಸಬೇಕೆಂದು ಹೆತ್ತವರು ಒತ್ತಾಯಮಾಡಿದರೆ, ತನ್ನವಸ್ಥೆಯು ಏನಾದೀತೆಂದು ಯೋಚಿಸುತ್ತಾ, ಅವನು ಥರಥರ ನಡುಗಿದ.

ಹೀಗೆ ಭಾವನಾ ಸಾಮ್ರಾಜ್ಯದ ಸುಖದುಃಖಗಳಲ್ಲಿ ಅವನು ಓಲಾಡುತ್ತಿದ್ದಾಗ ಗಾಡಿಯು ಒಂದು ಮನೆಯ ಇದಿರಲ್ಲಿ ನಿಂತಿತು. ಅವನ

ದೃಷ್ಟಿಯು ಸ್ವಾಭಾವಿಕವಾಗಿ ಮನೆಕಡೆ ಹೊರಳಿತು. ಸುಮಾರು ಹದಿ ಮೂರು ವರ್ಷದ ಹುಡುಗಿಯೊಬ್ಬಳು ಬಾಗಿಲಬಳಿ ಬಂದು, ಅನಂತನನ್ನು ನೋಡಿ, ಒಳಗೆ ಓಡಿಹೋದಳು. ಅನಂತನು ಅವಳನ್ನು ಸರಿಯಾಗಿ ನೋಡದಿದ್ದರೂ, ಅವಳು ಸುಂದರಿಯೆಂಬುದು ಅವನಿಗೆ ಗೊತ್ತಾಯಿತು. ಈ ಊರಿನಲ್ಲಿ ಲೋಲಾಕಿನ ಈ ಮುಗುದೆಯು ಎಲ್ಲಿಂದ ಬಂದಳೆಂದು ಅವನು ತಿಳಿಯದವನಾದನು. ತನ್ನ ತಂಗಿಯು ಬದುಕಿದ್ದರೆ ಹೀಗೆಯೇ ತೋರಬಹುದಿತ್ತೆಂದು ನೆನೆದು, ಬಾಲ್ಯದಲ್ಲೇ ಕಣ್ಮರೆಯಾದ ತಂಗಿಗಾಗಿ ಮನದಲ್ಲೇ ಮರುಗಿದನು. ಈಕೆಯು ತನ್ನ ಸೋದರತ್ತೆಯ ಮಗಳು ಲೀಲೆಯಾಗಿರಬಹುದೆಂಬುದು ಅವನಿಗೆ ತೋಚಲೇ ಇಲ್ಲ.

ಮನೆಯನ್ನು ಪ್ರವೇಶಿಸಿ, ಹಜಾರದಲ್ಲಿ ತನ್ನ ತಾಯಿಯೂ ಆ ಹುಡು ಗಿಯೂ ಒಟ್ಟಿಗೆ ಕುಳಿತು ಹೂಕಟ್ಟುವುದನ್ನು ನೋಡಿದ ಕೂಡಲೆ ಈಕೆಯು ಲೀಲೆಯಾಗಿರಬಹುದೆಂದು ಅವನಿಗೆ ತೋರಿತು. "ಹುಚ್ಚು ಹುಡುಗಿ, ಯಾರೊ ಬಂದರೆಂದು ಹೇಳಿ ಓಡಿಬಂದೆ. ನಿನ್ನ ಅನಂತ ಭಾವನಲ್ಲವೆ! ಏಳು. ಅವನಿಗೆ ಕೈಕಾಲು ತೊಳೆದುಕೊಳ್ಳಲು ನೀರು ಕೊಡು; ಇಲ್ಲವಾದರೆ ಬಚ್ಚಲುಕೊಟ್ಟಿಗೆಯನ್ನಾದರೂ ತೋರಿಸು. ಸೀತೇ, ಇತ್ತ ಬಾರೇ. ಅನಂತ ಬಂದ! ಪುಣ್ಯಮಾಡಿದವನು ಇಂತಹ ದಿನವೇ ಬರುತ್ತೇನೆಂದು ಬರೆಯಬೇಕೆ! ಇವನು ಇನ್ನೊಂದೆರಡು ದಿನಗಳಲ್ಲಿ ಬರಬಹುದೆಂದು ನೆನ ಸಿದ್ದೆವು. ಪರೀಕ್ಷೆ ಮುಗಿದ ಕೂಡಲೆ ಓಡಿಬಂದಿರಬೇಕು. ಪರೀಕ್ಷೆಯಲ್ಲಿ ಹೇಗೆ ಮಾಡಿದ್ದೀ? ಪಾಸಾಗಬಹುದೊ, ಫಸ್ಟ್‌ಕ್ಲಾಸೊ, ಸಾಧಾರಣ ಮಾಡಿದ್ದೀಯೊ?" ಕಾವೇರಮ್ಮನು ಕೇಳಿದಳು.

"ಒಳ್ಳೇದು ಮಾಡಿದ್ದೇನಮ್ಮಾ. ಒಮ್ಮೆ ಕಾಲು ತೊಳೆದುಕೊಂಡು ಬರುತ್ತೇನೆ. ನನಗೆ ಹಸಿವಾಗಿದೆ." ಅನಂತನು ಪಾದರಕ್ಷೆಗಳನ್ನು ಬಿಚ್ಚ ತೊಡಗಿದ.

ಅಷ್ಟರಲ್ಲೇ ಸೀತೆ ಅಲ್ಲಿಗೆ ಬಂದಳು. ಅವಳ ಹಣೆಯಲ್ಲಿ ಬೊಟ್ಟಿ ಲ್ಲದಿದ್ದುದನ್ನು ನೋಡಿ, ಅವಳು ವಿಧವೆಯೆಂದು ತಾಯಿಯು ಹಿಂದೊಮ್ಮೆ

ಹೇಳಿದುದು ಅವನಿಗೆ ನೆನಪಾಯಿತು; ಅವನ ಮೈ ಜುಮ್ಮೆಂದಿತು. ಅವಳ ರೂಪಲಾವಣ್ಯಗಳನ್ನು ನೋಡಿ ಅವನು ಮುಗ್ಧನಾದನು. ಮದರಾಸಿನ ಆ ಬೆಡಗಿಯರ ಕೃತಕ ಸೌಂದರ್ಯಕ್ಕಿಂತಲೂ ಈಕೆಯ ಸ್ವಾಭಾವಿಕ ಸೌಂದರ್ಯವು ಸಾವಿರ ಪಾಲು ಹೆಚ್ಚಿನದೆಂದು ಅವನಿಗೆ ತೋರಿತು. ಆದರೆ ಮಾಡುವುದೇನು? ವಿಧವೆಯಾದ ಈಕೆಯ ಸೌಂದರ್ಯವು ಕಡಲ ತಳದಲ್ಲಿರುವ ಅನುಪಮಕಾಂತಿಯುತ ರತ್ನರಾಶಿಯಂತೆಯೂ, ಮರುಭೂಮಿಯಲ್ಲರಳುವ ಕಮ್ಮಲರಿನಂತೆಯೂ ಕಾನನದ ಬೆಳ್ದಿಂಗಳಂತೆಯೂ ವ್ಯರ್ಥವಾಗಿ ಹೋಗುವುದರಲ್ಲೇನೂ ಸಂಶಯವಿಲ್ಲ. ಸುಶಿಕ್ಷಿತನಾದ ತಾನು ಈಕೆಯನ್ನು ಮದುವೆಯಾಗಬಾರದೇ? ಹಿಂದೆ ಶಾಲಾಕೊಲೇಜುಗಳಲ್ಲಿ ವಿಧವಾ ವಿವಾಹವನ್ನು ಸಮರ್ಥಿಸಿ ಉದ್ದುದ್ದ ಭಾಷಣಗಳನ್ನಿತ್ತು, ಸಭಿಕರಿಂದ ಪ್ರಚಂಡ ಕರತಾಡನವನ್ನು ಹೊಂದಿದ ತಾನು ಈಗ ಕಾರ್ಯರಂಗಕ್ಕಿಳಿದು ಸಮಾಜ ಸುಧಾರಕನಾಗಬಾರದೇಕೆ?

ಉಡುಪಿಯಲ್ಲಿ ತನ್ನ ರಜೆಯನ್ನು ಹೇಗೆ ಕಳೆಯಲಿ ಎಂಬ ಯೋಚನೆಯನ್ನು ಅವನು ಬಿಟ್ಟುಬಿಟ್ಟನು. ತನಗೆ ಬರೇ ಎರಡು ತಿಂಗಳು ರಜೆಯಿದ್ದುದಕ್ಕಾಗಿ ಅವನಿಗೆ ಬಹಳ ಅಸಮಾಧಾನವಾಯಿತು.

ಅವನು ಕಾಫಿಕುಡಿದೇಳುವಾಗ ಕಾವೇರಮ್ಮನು ನಸುನಗೆಯೊಂದಿಗೆ "ಅನಂತಾ, ಲೀಲೆಯನ್ನು ಚೆನ್ನಾಗಿನೋಡು. ಇವಳನ್ನು ಮದುವೆಯಾಗಲು ನಿನ್ನ ಆಕ್ಷೇಪವಿಲ್ಲವಷ್ಟೆ?" ಎಂದು ವಿನೋದಕ್ಕಾಗಿ ಕೇಳಿದಳು.

ಲೀಲೆಯು ಹುಸಿಮುನಿಸಿನಿಂದ "ಕಾವೇರತ್ತೆ, ಇನ್ನು ನೀವು ಹೀಗೆ ಮದುವೆಯ ಮಾತೆತ್ತಿದರೆ ನಾನು ಇಲ್ಲಿಗೆ ಬರುವುದೇ ಇಲ್ಲ. ತಿಳಿದಿರಲಿ" ಎಂದಳು.

"ಅತ್ತೆ, ಕತ್ತಲಾಯಿತು. ಅಮ್ಮನು ನಮ್ಮನ್ನು ಕಾದು ಕುಳಿತಿರಬಹುದು. ಹೋಗಿಬರುತ್ತೇವೆ" ಸೀತೆಯು ಕೋಕಿಲ ಕಂಠವನ್ನು ಕೇಳಿ

ಅನಂತನು ಪುಳಕಿತನಾದ. ತಾನೂ ಅವರೊಂದಿಗೆ ಹೋಗಿ, ಅತ್ತೆಯನ್ನು ನೋಡಿಬರುವುದಾಗಿ ಹೇಳಿ ಹೊರಟ.

ಮನೆಮುಟ್ಟುತ್ತಲೆ ಲೀಲೆಯು ಒಳಗೆ ಓಡಿಹೋಗಿ, "ಅಮ್ಮಾ, ಅನಂತಭಾವ ಬಂದಿದ್ದಾನೆ. ನಮ್ಮೊಟ್ಟಿಗೆ ಇಲ್ಲಿಗೆ ಬಂದಿದ್ದಾನೆ. ಹೊರಗಿದ್ದಾನೆ!" ಎಂದು ಕೂಗಿ ಹೇಳಿದಳು. ಚಂದ್ರಭಾಗಮ್ಮನು ಬಾಗಿಲಬಳಿ ಬಂದಳು.

ಅನಂತನು ಆಕೆಯ ಕಾಲು ಹಿಡಿದು ನಮಸ್ಕರಿಸಿದನು. ಆಕೆಯು ಅವನನ್ನೆತ್ತಿ "ಅನುರೂಪಳಾದ ಕನ್ಯೆಯನ್ನು ವರಿಸಿ ಸುಖದಿಂದ ಬಾಳಪ್ಪಾ" ಎಂದು ಆಶೀರ್ವದಿಸಿದಳು.

ಚಂದ್ರಭಾಗಮ್ಮನು ತನ್ನ ಸುಖದುಃಖಗಳನ್ನೆಲ್ಲಾ ತೋಡಿಕೊಂಡಳು. ಮಿಂಚಿಹೋದುದಕ್ಕೆ ಚಿಂತಿಸಿ ಫಲವಿಲ್ಲವೆಂದೂ ಇನ್ನು ಮುಂದೆ ದೇವರ ದಯೆಯಿಂದ ಎಲ್ಲವೂ ಸುಗಮವಾಗುವುದೆಂದೂ ಹೇಳಿ ಅನಂತನು ಅವಳನ್ನು ಸಂತಯಿಸಿದ.

ಅವನು ಮನೆಗೆ ಹೋಗಲೆಂದೆದ್ದಾಗ ಎಲ್ಲರೂ ಅವನೊಂದಿಗೆ ಹೆಬ್ಬಾಗಿಲ ವರೆಗೆ ಬಂದರು. ಅವನು ಆಗಾಗ ಬಂದು ಹೋಗುತ್ತಿರಬೇಕೆಂದು ಚಂದ್ರಭಾಗಮ್ಮನು ಸಾರಿ ಸಾರಿ ಹೇಳಿದಳು. ಅನಂತನು ಸಂತೋಷದಿಂದೊಪ್ಪಿ, ಸೀತೆಯ ರೂಪವನ್ನೇ ಧ್ಯಾನಿಸುತ್ತಾ ಮನೆಯ ಕಡೆಗೆ ಸಾಗಿದ.

ಈ ಮಧ್ಯೆ ಅವನು ಬಿಟ್ಟ ನಿಟ್ಟುಸಿರೊಂದು ಅವನ ಗಮನಕ್ಕೇ ಬರಲಿಲ್ಲ.

---

## ೭

ವಾಚಾಳಿಯಾದ ಲೀಲೆಯು ಒಂದೆರಡು ದಿನಗಳಲ್ಲೇ ಅನಂತನೊಡನೆ ಬಹಳ ಸಲುಗೆಯಿಂದ ವರ್ತಿಸತೊಡಗಿದಳು. ಸಂದರ್ಭ ಸಿಕ್ಕಿದಾಗ

ಅವನನ್ನು ಅಪಹಾಸ್ಯಕ್ಕೀಡುಮಾಡಲೂ ಅವಳು ಹಿಂಜರಿಯುತ್ತಿರಲಿಲ್ಲ. ಸೀತೆಯು ಆಕ್ಷೇಪಿಸಿದರೆ, ಇನ್ನೆಂದಿಗೂ ಹಾಗೆ ಮಾಡುವುದಿಲ್ಲವೆಂದು ಭರವಸೆ ಕೊಡುವಳು. ಆದರೆ ಅನಂತನು ಬಂದನೆಂದರೆ ಪುನಃ ತನ್ನ ಹುಡುಗಾಟವನ್ನು ಪ್ರಾರಂಭಿಸುವಳು.

ಅನಂತನಿಗೂ ಅವಳೊಡನೆ ಮಾತುಕತೆಯಾಡುವುದೆಂದರೆ ಇಷ್ಟ. ಸಣ್ಣ ಮಕ್ಕಳ ತೊದಲ್ನುಡಿಯಿಂದ ಹಿರಿಯರು ಎಷ್ಟು ಸುಖವನ್ನನುಭವಿಸುವರೋ ಅಷ್ಟೇ ಸುಖವನ್ನು ಅನಂತನು ಲೀಲೆಯ ಮಾತುಕತೆಯಿಂದ ಪಡೆಯುತಿದ್ದ. ಆದರೆ ಚಂದ್ರಭಾಗಮ್ಮನೂ ಸೀತೆಯೂ ಅವನ ವರ್ತನೆಯನ್ನು ವಿಪರೀತವಾಗಿ ಭಾವಿಸಿದರು.

ಅನಂತನು ಲೀಲೆಯಲ್ಲಿ ಅನುರಕ್ತನಾಗಿರುವನೆಂದು ಚಂದ್ರಭಾಗಮ್ಮನು ಭಾವಿಸಿ, ತನ್ನಭಿಪ್ರಾಯವನ್ನು ಸೀತೆಗೂ ತಿಳಿಸಿದಳು. ತಾಯಿಯ ಅಭಿಪ್ರಾಯವು ಸರಿಯೆಂದು ಸೀತೆಗೆ ಅನಿಸಿದರೂ, ಈ ಸಂಗತಿಯಲ್ಲಿ ಅವಸರಪಟ್ಟು ಕೆಲಸಮಾಡಬಾರದೆಂದೂ ಸಮಯವರಿತು ಅನಂತನೊಂದಿಗೆ ವಿವಾಹದ ಪ್ರಸ್ತಾಪವೆತ್ತಿ ಮುಂದುವರಿಯಬೇಕೆಂದೂ ಸೀತೆಯು ಹೇಳಿದಳು.

ಅವಳು ಹೀಗೆ ಹೇಳಲು ಬೇರೊಂದು ಕಾರಣವೂ ಇತ್ತು. ಲೀಲೆಯಲ್ಲಿದ್ದ ಅನಂತನ ಅನುರಾಗವು ಭಗಿನಿಯಲ್ಲಿರಬಹುದಾದಂತಹ ಪ್ರೀತಿಯಾಗಿರಬಹುದೆಂದೂ ಅದಿನ್ನೂ ಪ್ರಣಯವಾಗಿ ಪರಿಣಮಿಸಿರಲಿಕ್ಕಿಲ್ಲೆಂದೂ ಸೀತೆಗೆ ಮನವರಿಕೆಯಾಗಿತ್ತು. ಅಲ್ಲದೆ ಅನಂತನು ತನ್ನೆಡೆಗೆ ಪ್ರೇಮಪೂರ್ಣ ದೃಷ್ಟಿಯಿಂದ ನೋಡುತ್ತಿರುವುದನ್ನೂ ತನ್ನೊಡನೆ ಮಾತನಾಡುವಾಗ ಆತನು ಒಂದು ವಿಧದ ಉಲ್ಲಾಸದಿಂದಿರುವುದನ್ನೂ ತನ್ನನ್ನಗಲುವ ಹೊತ್ತು ಸಮೀಪಿಸುವಾಗ ಆತನು ಚಡಪಡಿಸುತ್ತಿರುವುದನ್ನೂ ಆಕೆಯು ಕಂಡಿದ್ದಳು. ಅನಂತನ ಇನ್ನೂ ಅನೇಕ ವರ್ತನೆಗಳಿಂದಾಗಿ ಆತನು ತನ್ನಲ್ಲಿ ಅನುರಕ್ತನಾಗಿರುವನೆಂದು ಆಕೆಗೆ ಹೊಳೆದಿತ್ತು. ತನ್ನ ಮೇಲೆ ಅನಂತನಿಗಿರಬಹು

ದಾದ ಪ್ರೇಮವನ್ನು ಲೀಲೆಯೆಡೆಗೆ ತಿರುಗಿಸಿ, ಅವರಿಬ್ಬರೂ ದಂಪತಿಗಳಾಗಿ ಸುಖಸಂಸಾರ ಹೂಡುತ್ತಿರುವಾಗ, ಅವರ ಮಕ್ಕಳನ್ನೆತ್ತಿ, ಆಡಿಸಿ, ಮುದ್ದಿಸಿ, ತನ್ನ ಜನ್ಮಸಾರ್ಥಕಗೊಳಿಸಬೇಕೆಂಬುದು ಅವಳ ಹಂಬಲವಾಗಿತ್ತು.

ಆದರೆ, ಪಾಪ! ಸೀತೆಯ ಬಯಕೆಯು ಅಲ್ಲೆ ಉಳಿಯಿತು. ಅನಂತನು ತನ್ನಲ್ಲೆ ಅನುರಕ್ತನಾಗಿರುವನೆಂಬುದು ಹೆಚ್ಚು ಹೆಚ್ಚು ನಿಚ್ಚಳವಾಗಿ ಗೋಚರಿಸತೊಡಗಿ, ಕೆಲದಿನಗಳಲ್ಲೆ ಎಳ್ಳಷ್ಟೂ ಸಂಶಯಕ್ಕವಕಾಶವಿಲ್ಲವಾಯಿತು. ಅವನು ನಿರರ್ಥಕವಾಗಿ ಬಳಲುವುದನ್ನು ನೋಡಿ ಸೀತೆಯು ಮರುಗಿದಳು. ತಾನೆಂದಿಗೂ ಪುನರ್ವಿವಾಹಕ್ಕೊಪ್ಪೆನೆಂದು ಸ್ಪಷ್ಟವಾಗಿ ಹೇಳಿದರೆ, ಅವನು ಲೀಲೆಯನ್ನು ಪ್ರೀತಿಸತೊಡಗಿ ವಿವಾಹವಾಗಬಹುದೆಂದು ಒಮ್ಮೆ ಆಕೆಗೆ ತೋರಿತು. ಆದರೆ ತಾನು ಹಾಗೆ ಹೇಳಿಬಿಟ್ಟರೆ, ಅವನು ಕೋಪನಿರಾಶೆಗಳಿಂದ ತಮ್ಮಲ್ಲಿಗೆ ಬರುವುದನ್ನೇ ನಿಲ್ಲಿಸಿಬಿಡಬಹುದು. ಆಗ, ಮದುವೆಯ ಮಾತಂತಿರಲಿ, ‚ತೀರ ಸಮೀಪದ ಸಂಬಂಧಿಕರಲ್ಲಿ ವೈಮನಸ್ಯವುಂಟಾಗುವುದು ನಿಶ್ಚಯ.

ಸೀತೆಯು ತನ್ನ ಹೃದಯವನ್ನೇ ಪರಿಶೋಧಿಸತೊಡಗಿದಳು. ಅಲ್ಲಿ, ಒಂದು ಮೂಲೆಯಲ್ಲಿ, ಅನಂತನ ಪ್ರೇಮಕ್ಕೆ ಪ್ರತಿಪ್ರೇಮವು ಹುದುಗಿಕೊಂಡಿತ್ತು. ದಿನಗಳೆದಂತೆ ಆಕೆಯ ಆ ಪ್ರೇಮಬೀಜವು ಮೊಳಕೆಹೊಂದಿ, ಗಿಡವಾಗಿ, ಮರವಾಗುವುದರಲ್ಲಿತ್ತು. ತನ್ನ ವಿವಾಹವನ್ನು ಅನಂತನೊಂದಿಗೆ ನೆರವೇರಿಸಿದ್ದರೆ ಎಷ್ಟು ಯೋಗ್ಯವಾಗಿತ್ತೆಂದು ನೆನೆದು ನಿಟ್ಟುಸಿರುಬಿಡುವಳು. ಈಗಲಾದರೂ, ಆತನು ತನ್ನನ್ನು ವರಿಸಲಿಚ್ಛಿಸಿದರೆ, ತಾನೇಕೆ ಆತನ ಅರ್ಧಾಂಗಿಯಾಗಬಾರದೆಂದು ಮನಸ್ಸಿನಲ್ಲೆ ಪ್ರಶ್ನಿಸತೊಡಗುವಳು. ಆಗ ಆಕೆಗೆ ಮೃತ್ಯುಶಯ್ಯೆಯಲ್ಲಿದ್ದ ಪತಿಯ ನೆನಪಾಗುವುದು. ಸಾಯುವುದಕ್ಕೆ ಸ್ವಲ್ಪ ಹೊತ್ತಿರುವಾಗ, ಆತನು ಆಕೆಯನ್ನು ಕರೆದು ಪಕ್ಕದಲ್ಲಿ ಕುಳ್ಳಿರಿಸಿ, ಮೈದಡವಿ, "ಸೀತೆ, ನಾನು ಹೋಗಿಬರಲೆ? ಸಂತೋಷದಿಂದ ನನಗೆ ಅನುಮತಿ ಕೊಡು. ನಾನು ಸತ್ತ ಮೇಲೆ ನೀನು ದುಃಖದಲ್ಲೆ ಕಾಲಕಳೆಯಬಾರದು. ನಿನ್ನ ವಿದ್ಯಾಭ್ಯಾಸವನ್ನು ಮುಂದುಪರಿಸಿ, ಉದ್ಯೋಗಸಂಪಾ

ದಿಸು. ಯೋಗ್ಯನಾದ ಯಾರಾದರೊಬ್ಬನು ನಿನ್ನನ್ನು ವರಿಸುವ ಇಚ್ಛೆಯನ್ನು ವ್ಯಕ್ತಪಡಿಸಿದರೆ, ಅಗತ್ಯವಾಗಿ ಮದುವೆಯಾಗು ಇದೇ ನನ್ನ ಕೊನೆಯ ಇಚ್ಛೆ. ಒಳ್ಳೆಯ ಸಂಧಿ ದೊರೆತಾಗಲೂ, ನೀನು ಹುಚ್ಚುಕಲ್ಪನೆಯಿಂದಾಗಿ ವಿವಾಹವಾಗದೆ ವಿಧವೆಯಾಗಿಯೆ ಉಳಿದರೆ, ಅದರಿಂದ ನನಗೆ ಪರಲೋಕದಲ್ಲಾಗಬಹುದಾದ ವ್ಯಥೆ ಅಷ್ಟಿಷ್ಟಲ್ಲ" ಎಂದು ತಿಳಿಸಿದ್ದ. ಸಾಧ್ಯವಿದ್ದರೆ ತಾನು ಖಂಡಿತವಾಗಿಯೂ ಪುನರ್ವಿವಾಹವಾಗುವೆನೆಂದು ಮಾತುಕೊಟ್ಟ ಮೇಲೆ, ಆತನು ಸಂತುಷ್ಟನಾಗಿ ದೇಹತ್ಯಾಗಮಾಡಿದ್ದ. ಇಂತಹ ವಿಶಾಲ ಮನೋವೃತ್ತಿಯ ಪತಿಯು ತನಗೆ ಸಿಕ್ಕಿದ್ದರೂ, ದಕ್ಕದಿದ್ದುದಕ್ಕಾಗಿ ಆಕೆಗೆ ಬಹಳ ವ್ಯಥೆಯಾಗುವುದು. ಪತಿಯ ಅಂತಿಮ ಕಾಂಕ್ಷೆಯನ್ನು ನೆರವೇರಿಸುವ ಸಂದರ್ಭವು ತನಗೆ ಕ್ಷಿಪ್ರದಲ್ಲೆ ಬರಬಹುದಾದುದರಿಂದ, ತಾನು ಹೇಗೆ ವರ್ತಿಸಬೇಕೆಂಬುದಾಗಿ ಆಕೆಯು ಯೋಚನೆಗೊಳಗಾಗುವಳು.

ಅನಂತನನ್ನು ತಾನು ವರಿಸಿದರೆ, ಪರಲೋಕವಾಸಿಯಾದ ತನ್ನ ಸ್ವಾಮಿಗೆ ಸಂತೋಷವಾಗುವುದೇನೋ ನಿಜ. ಆದರೆ ಇಹಲೋಕದಲ್ಲಿ ಸ್ವಾಮಿರಾಯರು ಬಹಿಷ್ಕಾರ ಹಾಕಿದರೆ, ಬಹಿಷ್ಕೃತೆಯ ತಂಗಿಯನ್ನು ವರಿಸುವವರಾರು? ಈಗ ಸುಮ್ಮನಿದ್ದರೆ, ಲೀಲೆಯ ವಿವಾಹಾನಂತರ ತಾನು ಅನಂತನನ್ನು ಮದುವೆಯಾಗಬಹುದು. ಬಹಿಷ್ಕೃತೆಯಾದರೆ ತನಗೇನೂ ಬೇಸರವಿಲ್ಲ. ಈಗ ತನಗೆ ಸಮಾಜದಲ್ಲಿ ಸ್ಥಾನವಿಲ್ಲ. ತನ್ನಂತಹ ವಿಧವೆಯರು ಕಾಲ್ಪುಡದ ಕಸಕ್ಕಿಂತಲೂ ಕೀಳೆಂದು ಎಲ್ಲರೂ ಭಾವಿಸುವರು. ಅಂತಹ ತಾನು ಬಹಿಷ್ಕೃತೆಯಾದರೆ ಏನೂ ಕಳೆದುಕೊಂಡಂತಾಗುವುದಿಲ್ಲ.

ಆದರೆ, ತನ್ನನ್ನು ವರಿಸಿದರೆ, ಅನಂತನ ಅವಸ್ಥೆಯೇನಾಗುವುದು? ಅವನು ವಕಾಲತ್ತು ಪಾಸಾಗಿ, ಗಣ್ಯವಕೀಲನಾಗಿ ಪ್ರಸಿದ್ಧಿ ಹೊಂದಿ, ಸುಖದಿಂದಿರಬೇಕಾದವನು. ತನ್ನಂತಹ ಅಭಾಗಿನಿಗಾಗಿ, ಅವನು ತನ್ನ ಭವಿಷ್ಯವನ್ನೇ ಹಾಳುಮಾಡಿಕೊಳ್ಳಲುದ್ಯುಕ್ತನಾದರೆ, ಅಂತಹ ಕೆಲಸಕ್ಕೆ ತಾನು ನೆರವಾಗುವುದು ದೇವರ ದೃಷ್ಟಿಯಲ್ಲಿ ನ್ಯಾಯಯುತವೆನಿಸದು. ಅವನ

ಪ್ರೇಮವು ಅಗಾಧವಾಗಿದ್ದರೆ, ಪ್ರೇಮಕ್ಕಾಗಿ ಅವನು ಎಂತಹ ಕಷ್ಟವನ್ನೂ ಹಸನ್ಮುಖದಿಂದ ಅನುಭವಿಸಲು ಸಿದ್ಧನೆಂದು ತನಗೆ ತಿಳಿದುಬಂದರೆ, ಆಗ ಅವನಿಚ್ಛೆಯನ್ನು ಸಲ್ಲಿಸದಿದ್ದರೆ, ತನ್ನ ಮೃತಸ್ವಾಮಿಗೆ ದ್ರೋಹವೆಸಗಿದಂತಾಗುವುದು.

ಯಾವುದಕ್ಕೂ ಸುಮ್ಮನಿದ್ದು, ದೇವರು ನಡೆಸಿದಂತೆ ನಡೆದರೆ ಅದೇ ಶ್ರೇಯಸ್ಕರವಾದ ಮಾರ್ಗವೆಂಬುದಾಗಿ ಸೀತೆಯು ನಿರ್ಧರಿಸಿದಳು.

ಎಲ್ಲ ಭಾರವನ್ನೂ ದೇವರ ಮೇಲೆ ಹೊತ್ತುಹಾಕಿದರೂ, ಸೀತೆಯ ಮನಸ್ಸಿಗೆ ಸಮಾಧಾನವಿರಲಿಲ್ಲ. ತನ್ನನ್ನು ವರಿಸಿದರೆ ಅನಂತನ ಭವಿಷ್ಯವೇ ಹಾಳಾಗುವುದೆಂದು ಅವಳು ತಿಳಿದಿದ್ದಳು. ಆದುದರಿಂದ ಹೇಗಾದರೂ ಅವನು ಲೀಲೆಯನ್ನೇ ವರಿಸುವಂತಾಗಲೆಂದು ನಿತ್ಯವೂ ಪ್ರಾರ್ಥಿಸುತ್ತಿದ್ದಳು.

ತನ್ನ ಕಾರ್ಯಸಾಧನೆಗೋಸುಗ ಸೀತೆಯು ಎರಡು ಕೆಲಸಗಳನ್ನು ಮಾಡಬೇಕಾಗಿತ್ತು. ಮೊದಲನೆಯದಾಗಿ, ತನ್ನ ಮೇಲಿದ್ದ ಅನಂತನ ಪ್ರೇಮವನ್ನು ನಾಶಗೊಳಿಸುವುದು; ಎರಡನೆಯದಾಗಿ, ಅನಂತನು ಲೀಲೆಯಲ್ಲಿ ಅನುರಕ್ತನಾಗುವಂತೆ ಮಾಡುವುದು.

ಈ ಎರಡನ್ನು ಸಾಧಿಸಲಿಕ್ಕಾಗಿ ಹೇಗೆ ಮುಂದುವರಿಯಲೆಂದು ಸೀತೆಯು ಯೋಚಿಸತೊಡಗಿದಳು.

---

## ೮

ಸೀತೆಯ ವರ್ತನೆಯಲ್ಲಿ ಅಕಸ್ಮಾತ್ತಾಗಿ ಉಂಟಾದ ಮಾರ್ಪಾಟನ್ನು ನೋಡಿ ಎಲ್ಲರೂ ಆಶ್ಚರ್ಯಚಕಿತರಾದರು. ಸದಾ ಹಸನ್ಮುಖಿಯಾಗಿದ್ದ ಸೀತೆಯು ಈಗ ಇಡೀ ದಿನ ಮೋರೆ ಗಂಟಿಕ್ಕಿಕೊಂಡಿರುವಳು. ಲೀಲೆಯನ್ನು

ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸುತ್ತಿದ್ದ ಸೀತೆಗೆ ಈಗ ಅವಳ ನೆರಳು ಕಂಡರೂ ಆಗದು. ಲೀಲೆಯ ಹುಡುಗಾಟಿಕೆಯೂ ವಿನೋದವೂ ಅವಳಿಗೀಗ ಸೇರವು. ಅಲ್ಪ ಕಾರಣಕ್ಕಾಗಿ ರೇಗುವಳು; ಲೀಲೆಯನ್ನು ಬಾಯಿಗೆ ಬಂದಂತೆ ಬಯ್ಯುವಳು; ಒಮ್ಮೊಮ್ಮೆ ಲೀಲೆಯನ್ನು ಚೆನ್ನಾಗಿ ಶಿಕ್ಷಿಸುವಳು.

ಲೀಲೆಯನ್ನು ಹಾಗೆ ಶಿಕ್ಷಿಸಬಾರದೆಂದು ಚಂದ್ರಭಾಗಮ್ಮನು ಆಕ್ಷೇಪಿಸಿದಾಗ, "ಅಮ್ಮಾ, ನಿನಗೇನೂ ಗೊತ್ತಿಲ್ಲ. ಇವಳು ಬಹಳ ಸೊಕ್ಕಿದ್ದಾಳೆ. ಇನ್ನೂ ಇವಳು ಸಣ್ಣವಳೆ? ಹುಡುಗಾಟಿಕೆ ಇನ್ನೂ ಬಿಟ್ಟಿಲ್ಲ. ಈಗ ಇವಳನ್ನು ಹೀಗೆಯೇ ಬಿಟ್ಟರೆ, ಕಡೆಗೆ ಗಾಳಿತಾಗಿದ ಅನ್ನದಂತೆ ಆದಾಳು! ಇವಳೇನು ಮಾಡಿದರೂ ನಿನಗೆ ಚಂದ. ನೀನೇನೂ ಮಾತಾಡುವವಳಲ್ಲವೆಂದಮೇಲೆ ನಾನಾದರೂ ಇವಳನ್ನು ತಿದ್ದಬೇಡವೆ? ಇವಳ ಚೇಷ್ಟೆಗಳು ಈಗ ನನಗೆ ಸೇರವು. ನನ್ನನ್ನು ನನ್ನಷ್ಟಕ್ಕೆ ಬಿಡಬೇಕೆಂದು ಎಷ್ಟು ಹೇಳಿದರೂ, ಇವಳು ನನ್ನ ಗೋಜಿಗೆ ಬರುವುದೇತಕ್ಕೆ?" ಎನ್ನುವಳು.

ಅನಂತನು ಚಂದ್ರಭಾಗಮ್ಮನಲ್ಲಿಗೆ ಬಂದಾಗ, ಒಂದೆರಡು ಸಲ ಲೀಲೆಯು ಕಂಬನಿ ಮಿಡಿಯುವುದನ್ನು ಕಂಡಿದ್ದ ಕಾರಣವೇನೆಂದು ವಿಚಾರಿಸಿದಾಗ ಲೀಲೆಯು ಹೇಳದೆ, ತಪ್ಪಿಸಿಕೊಳ್ಳಲು ಯತ್ನಿಸಿ, ನಗತೊಡಗುತ್ತಿದ್ದಳು. ಅನಂತನು ಚಂದ್ರಭಾಗಮ್ಮನೊಡನೆಯೂ ವಿಚಾರಿಸಿ ನಿರಾಶನಾದ. ಕಡೆಗೆ ಸೀತೆಯೇ ಎಲ್ಲವನ್ನೂ ವಿವರಿಸಿದಳು. "ನಾನು ಒಂದೆರಡು ವರ್ಷ ಮನೆಯಲ್ಲಿಲ್ಲದಿದ್ದಾಗ ಈಕೆಯು ಸೊಕ್ಕಿ ಹೋಗಿರುವಳು. ಈಕೆಯನ್ನು ಹತೋಟಿಗೆ ತರುವುದು ಅಮ್ಮನಿಂದಾಗದ ಮಾತು. ನನ್ನಿಂದ ಸಾಧ್ಯವಿದೆಯೊ ಇಲ್ಲವೊ ಎಂಬುದನ್ನು ನೋಡಿಯೇ ಬಿಡುತ್ತೇನೆ. ನಾನು ಬೇಡ ಬೇಡವೆಂದು ಎಷ್ಟು ಸುಮ್ಮನಿದ್ದರೂ, ಈಕೆಯು ನನ್ನ ತಾಳ್ಮೆ ಕೆಡಿಸಿರುವಳು. ಇವಳ ಹಣೆಬರಹವನ್ನು ಬೇಕಾದರೆ ಶಾಲೆಯಲ್ಲಿ ಸಂಗಾತಿಗಳಿಗೆ ತೋರಿಸಲಿ. ಆದರೆ ಹಿರಿಯರೆಂಬ ಗೌರವವೂ ಬೇಡವೆ? ಭಾವಯ್ಯಾ, ಇವಳು ಎಷ್ಟೊ ಸಲ ನಿನ್ನನ್ನೂ ಅಪಹಾಸ್ಯಕ್ಕೀಡುಮಾಡಿಲ್ಲವೆ?"

ಲೀಲೆಯು ಪಶ್ಚಾತ್ತಾಪದಗ್ಧಹೃದಯದಿಂದ, "ಅಕ್ಕಾ, ಇನ್ನು ಮೇಲೆ ನಾನು ಹಾಗೆಂದಿಗೂ ಮಾಡೆ. ನಾನು ಯಾರ ಗೋಜಿಗೂ ಹೋಗದೆ ನನ್ನಷ್ಟಕ್ಕೆ ಇದ್ದು ಬಿಡುತ್ತೇನೆ" ಎಂದಳು.

"ಸೀತೆ, ಲೀಲೆಯು ಪಾಪ! ಇನ್ನೂ ಹಸುಗೂಸು. ದೊಡ್ಡವಳಾದ ಮೇಲೆ ಇವಳ ಹುಡುಗಾಟವು ತಾನಾಗಿಯೆ ತೊಲಗುವುದು. ಈ ಪ್ರಾಯಕ್ಕೆ ಇವಳು ಹೀಗೆ ವರ್ತಿಸುವುದೆ ಯೋಗ್ಯ" ಅನಂತನೆಂದ.

"ಇವಳ ನಡತೆಯು ನಿಮಗೆಲ್ಲರಿಗೂ ಸರಿದೋರುವುದಾದರೆ ನಾನೇ ನೆನ್ನಲಿ? ಆದರೆ ಲೀಲೆ, ನನ್ನ ಗೋಜಿಗೆ ಮಾತ್ರ ಬರಬೇಡ. ಬಂದರೆ ನಿನ್ನನ್ನು ಜೀವಸಹಿತ ಬಿಡೆ."

ತನ್ನ ಮಾತುಗಳಿಂದಲೂ ವರ್ತನೆಯಿಂದಲೂ ಅನಂತನಿಗೆ ತನ್ನಲ್ಲಿ ತಿರಸ್ಕಾರವೂ, ಲೀಲೆಯಲ್ಲಿ ದಯೆಯೂ ಪ್ರೀತಿಯೂ ಉಂಟಾಗಿ, ಕಡೆಗೆ ಅನಂತನು ಲೀಲೆಯಲ್ಲಿ ಅನುರಕ್ತನಾಗಬಹುದೆಂದು ಸೀತೆಯು ಎಣಿಸಿದ್ದಳು. ಆದರೆ, ಅನಂತನು ಸೀತೆಯೆಡೆಗೆ ಕರುಣಾಪೂರ್ಣ ದೃಷ್ಟಿಯಿಂದ ನೋಡ ತೊಡಗಿ ನಿಟ್ಟುಸಿರಿಡಲು, ಸೀತೆಯ ಹೃದಯವನ್ನು ಇರಿದಂತಾಯಿತು.

ಅಂದು ರಾತ್ರಿ ಸೀತೆಗೆ ನಿದ್ದೆ ಬರಲೊಲ್ಲದು. ಅವಳು ಮನಸ್ಸಿನಲ್ಲಿ ದೇವರನ್ನು ಧ್ಯಾನಿಸತೊಡಗಿದಳು. "ಪರಮಾತ್ಮಾ, ನಿನ್ನ ಇಚ್ಛೆಯೇನಿದೆ? ನನ್ನ ವರ್ತನೆಯಿಂದ ಅನಂತನಿಗೆ ನನ್ನಲ್ಲಿ ತಿರಸ್ಕಾರವಾಗದೆ ಹೋದುದು ಮಾತ್ರವಲ್ಲದೆ ಆತನ ಮನಸ್ಸು ಬಹಳ ನೊಂದಂತೆ ಕಾಣುತ್ತದೆ. ಇದನ್ನು ನಾನು ಸಹಿಸಿಕೊಳ್ಳಲೆಂತು? ದೇವಾ, ನೀನೇಕೆ ಹೀಗೆ ಪ್ರತಿಕೂಲನಾಗಿರುವೆ? ನನ್ನ ಪ್ರಯತ್ನವು ಸಫಲವಾಗುವಂತೆ ಕರುಣಿಸು. ಈ ಉಪಾಯವು ಫಲಿಸದು. ಇನ್ನು ಮುಂದೆ ನಾನು ನನ್ನ ಬತ್ತಳಿಕೆಯಲ್ಲಿರುವ ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವೆನು. ನಾನು ಗೋವಿಂದ ಮಾಸ್ತರರಲ್ಲಿ ಅನುರಕ್ತೆಯಾದಂತೆ ತೋರಿಸಿದರೆ, ಅದರಿಂದ ಅನಂತನಿಗೆ ಅಸೂಯೆಯುಂಟಾಗಿ, ಅವನು

ನನ್ನನ್ನು ದ್ವೇಷಿಸತೊಡಗಿ, ಲೀಲೆಯನ್ನು ವರಿಸಲಾರನೆ? ದೇವಾ, ನನ್ನ ಕಾರ್ಯಸಿದ್ಧಿಯಾಗುವಂತೆ ನಡೆಸಿಕೊಡು."

ಲೀಲೆಯು ಗಾಢನಿದ್ರೆಯಲ್ಲಿದ್ದಳು. ಸೀತೆಯು ಅವಳ ಹಾಸಿಗೆಯ ಬಳಿ ಹೋಗಿ, ಪ್ರೀತಿಯಿಂದ ಮೈದಡವಿ, ಮನಸ್ಸಿನಲ್ಲೆ "ತಂಗೀ, ನಾನು ರಾಕ್ಷಸಿಯಾಗಿರುವೆನೆಂದು ನೀನು ಭಾವಿಸಿರಬಹುದಲ್ಲವೆ? ಆದರೆ ನಾನು ಮಾಡುವ ಈ ಸಮಸ್ತ ಕಾರ್ಯವೂ ನಿನ್ನ ಕಲ್ಯಾಣಕ್ಕಾಗಿಯೆ ಅಲ್ಲವೆ? ನಿನ್ನನ್ನು ಬಯ್ಯಬೇಕೆಂದರೆ ನನ್ನ ಜೀವದ ಸುತ್ತು ಬಂದಂತಾಗುತ್ತದೆ! ನಿನ್ನ ಸುಕುಮಾರ ದೇಹಕ್ಕೆ ಪೆಟ್ಟುಕೊಡುವಾಗ, ನನ್ನ ಹೃದಯಕ್ಕಾಗುವ ವೇದನೆಯನ್ನು ನೀನರಿಯೆ! ನನಗೋಸುಗ ಇದನ್ನೆಲ್ಲಾ ಸಹಿಸು." ಎಂದು ಹೇಳುತ್ತಾ ಬೆಳದಿಂಗಳಲ್ಲಿ ಲೀಲೆಯ ಮುಖವನ್ನೇ ನೋಡತೊಡಗಿದಳು.

ಲೀಲೆಯು ಕನವರಿಸುತ್ತಾ, "ಅಕ್ಕಾ, ಈಗೊಂದು ಬಾರಿ ಕ್ಷಮಿಸು. ಇನ್ನು ಮುಂದೆ ನಿನಗೆ ವಿಧೇಯಳಾಗಿ ವರ್ತಿಸುತ್ತೇನೆ. ನಿನ್ನ ಮನಸ್ಸಿಗಿನ್ನೆಂದೂ ಬೇಸರವನ್ನುಂಟುಮಾಡೆ" ಎಂದಳು.

ಸೀತೆಯಿಂದ ಇನ್ನು ತಡೆಯಲಾಗಲಿಲ್ಲ. ಅಶ್ರುಧಾರೆಯು ಪ್ರವಾಹರೂಪವಾಗಿ ಹರಿಯಲು, ಲೀಲೆಯನ್ನು ಬಲವಾಗಿ ತಬ್ಬಿಕೊಂಡು, ಮುದ್ದಿಟ್ಟು, "ನನ್ನ ಲೀಲೆ, ಹಿಂದೆ ನಡೆದುದೆಲ್ಲವನ್ನೂ ಮನಸ್ಸಿಗೆ ಹಚ್ಚಿಕೊಳ್ಳಬೇಡ. ನಾನು ಮಾಡುವುದೆಲ್ಲವೂ ನಿನ್ನ ಮೇಲ್ಮೆಗಾಗಿಯೆ ಎಂಬುದನ್ನು ನೀನರಿಯೆಯಾ? ನಿನಗೆ ಯುಕ್ತಕಂಡ ರೀತಿಯಲ್ಲಿ ವರ್ತಿಸು" ಎಂದು ಹೇಳಿದಳು.

ಅಕ್ಕತಂಗಿಯರಿಬ್ಬರೂ ಗಾಢಾಲಿಂಗನದಲ್ಲಿ ಮೈಮರೆತರು.

---

## ೬

ಮರುದಿನ ಸಾಯಂಕಾಲ ನಾಲ್ಕು ಗಂಟೆಗೆ ತಮ್ಮಲ್ಲಿಗೆ ಬರಬೇಕೆಂದು ಸೀತೆಯು ಗೋವಿಂದ ಮಾಸ್ತರರಿಗೆ ಹೇಳಿಕಳುಹಿಸಿದಳು. ಅನಂತನು

ಐದು ಗಂಟೆಗೆ ಬಂದಾಗ, ತಾನು ಅಲ್ಲಿಲ್ಲದೆ, ಮಾಸ್ತರರೊಟ್ಟಿಗೆ ತಿರುಗಾಡಲು ಹೋದ ಸಂಗತಿಯು ಅವನಿಗೆ ತಿಳಿದರೆ, ಅವನ ಹೃದಯದಲ್ಲಿ ಅಸೂಯಾನಲವು ಪ್ರಜ್ವಲಿಸದಿರದೆಂದು ಅವಳ ತರ್ಕ.

ಗೋವಿಂದರಾಯರು ನಾಲ್ಕು ಗಂಟೆಗೆ ಸರಿಯಾಗಿ ಬಂದರು. "ಒಂದು ದೊಡ್ಡ ಸುತ್ತು ತಿರುಗಿಕೊಂಡು ಬರೋಣವೆ?" ಎಂದು ಸೀತೆಯು ಕೇಳಿದಳು. ಲೀಲೆಯು ಅವರೊಟ್ಟಿಗೆ ತಾನೂ ಬರುವೆನೆಂದು ಹಟಹಿಡಿಯಲು, ಅವಳಿಂದ ಅಷ್ಟು ನಡೆಯಲಾಗದೆಂದು ಸೀತೆಯೆಂದಳು. ಅಕ್ಕನಿಗಿಂತ ತಾನು ಹೆಚ್ಚು ನಡೆಯಬಲ್ಲೆನೆಂದೂ, ಬೇಕಾದರೆ ಪಂಥಕಟ್ಟಲು ಸಿದ್ಧಳಿದ್ದೇನೆಂದೂ ಹೇಳಿ, ಲೀಲೆಯು ಹೊರಟುಬಂದು, ಅವರನ್ನು ಹಿಂಬಾಲಿಸಿದಳು. ಅವಳನ್ನು ಹಿಂದಕ್ಕೆ ಕಳುಹಿಸಬೇಕೆಂದು ಪಟ್ಟ ಶ್ರಮವು ವ್ಯರ್ಥವಾಗಲು, ಕೊನೆಗೆ ಅಹಿಂಸೆಯಿಂದ ಕಾರ್ಯವು ಸಾಧಿಸದೆಂದು ನಿರ್ಧರಿಸಿ, ಸೀತೆಯು ಲೀಲೆಗೆ ಒಂದೇಟನ್ನು ಕೊಟ್ಟಳು. ಲೀಲೆಯು ಅಳುತ್ತಾ ಹಿಂದಿರುಗಿದಳು. ಸೀತೆ ಗೋವಿಂದರಾಯರು ಮುನ್ನಡೆದರು.

"ಮಾಸ್ತರರೆ, ನಿಮಗೆ ಕರ್ಮದಲ್ಲಿ ನಂಬುಗೆಯಿದೆಯೆ?"

"ನಂಬುಗೆಯಿಲ್ಲವೇಕೆ? ಯೋಗಗಳಲ್ಲೆಲ್ಲಾ ಕರ್ಮಯೋಗವೆ ಮೇಲೆಂದು ನನ್ನಭಿಪ್ರಾಯ. ಮಾಯಾಪಾಶವನ್ನು ಕಿತ್ತೊಗೆದು ಪರಲೋಕದ ಸುಖಕ್ಕೋಸುಗ ಕಠಿನ ತಪಶ್ಚರ್ಯೆಯಲ್ಲಿ ನಿರತನಾಗಿರುವ ವಿರಕ್ತನಿಗಿಂತ ಸಂಸಾರದಲ್ಲೆ ಇದ್ದುಕೊಂಡು ಆದರ್ಶ ಜೀವನ ನಡೆಸುತ್ತ, ಲೋಕಕಲ್ಯಾಣಕ್ಕಾಗಿ ಹೆಣಗಾಡಿ, ತನುಮನಧನಗಳನ್ನರ್ಪಿಸುವ ಕರ್ಮಯೋಗಿಯೆ ಶ್ರೇಷ್ಠನು. ನಾನು ಹೇಳುವುದಾದರೆ ಸ್ವಹಿತಸಾಧನೆಗಾಗಿ ಪ್ರಯತ್ನಿಸುವ ಈ ತಪಸ್ವಿಗಳು ಸ್ವಾರ್ಥಪರರು."

"ಮಾಸ್ತರರೆ, ನಾನು ಹೇಳಿದ ಕರ್ಮವು ಅದಲ್ಲ. ದಾಸರು ಹಾಡುವರಲ್ಲ— 'ಪ್ರಾಚೀನ ಕರ್ಮವಿದು ಬಿಡಲರಿಯದು, ಯೋಚನೆಯ ಮಾಡಿ ಬಳಲುವದ್ಯಾಕೆ ಮನುಜಾ'— ಆ ಕರ್ಮ. ನಮ್ಮ ಹಿಂದೂಸಮಾಜದಲ್ಲಿ

ಪ್ರತಿಯೊಂದೂ ಕರ್ಮಾಧೀನವೆಂದು ನಂಬುತ್ತಾರೆ. ಹೀಗೆ ನಂಬುವುದ ರಿಂದ ನಮಗೆ ಹಿತಕ್ಕಿಂತ ಹೆಚ್ಚಿನ ಹಾನಿಯಾಗಿದೆಯೆಂದು ನನ್ನ ಭಾವನೆ. ಈ ವಿಷಯದಲ್ಲಿ ನೀವು ಹೇಳುವುದೇನು?"

"ಸೀತೆ, ನಾನೂ ಹಾಗೆಯೆ ಭಾವಿಸುತ್ತೇನೆ. ನಮ್ಮ ಸಮಾಜದಲ್ಲಿ ಯಾರಿಗೆ ಯಾವ ಕಷ್ಟ ಬಂದರೂ, ಅದು ಪೂರ್ವಜನ್ಮದಲ್ಲಿ ಮಾಡಿದ ಕರ್ಮದ ಫಲವೆಂಬುದಾಗಿ ಭಾವಿಸಿ ಹಲುಬುವರೇ ವಿನಾ, ಆ ಕಷ್ಟ ನಿವಾರಣೆಗಾಗಿ ಪುರುಷಪ್ರಯತ್ನ ಮಾಡುವುದಿಲ್ಲ. ಪರಕೀಯರು ಆಗಾಗ ಬಂದು ನಮ್ಮ ದೇಶದ ಒಡೆಯರಾಗಿ, ನಮ್ಮ ಸ್ವಾತಂತ್ರ್ಯವನ್ನಪಹರಿಸಿದುದು ನಮ್ಮ ಕರ್ಮಪ್ರಭಾವದಿಂದೆಂಬುದಾಗಿ ಭಾವಿಸಿ, ಕರ್ಮಕ್ಕೆ ತಲೆ ತಗ್ಗಿಸಿ, ಸುಮ್ಮನಿರುವ ಮಹಾನುಭಾವರು ನಮ್ಮಲ್ಲಿ ಇಂದಿಗೂ ಬೇಕಷ್ಟು ಮಂದಿ ಇರುವರು. ಪೂರ್ವಜನ್ಮದಲ್ಲಿ ಪುಣ್ಯ ಮಾಡಿದವರು ಪುರುಷರಾಗಿಯೂ, ಬ್ರಾಹ್ಮಣರಾಗಿಯೂ, ಶ್ರೀಮಂತರಾಗಿಯೂ ಹುಟ್ಟುವರೆಂದೂ, ಪಾಪ ಮಾಡಿದವರು ಸ್ತ್ರೀಯರಾಗಿಯೂ, ಹರಿಜನರಾಗಿಯೂ, ಬಡವರಾಗಿಯೂ ಹುಟ್ಟುವರೆಂದೂ, ಆದುದರಿಂದ ಸ್ತ್ರೀಯರಿಗೆ ಸಮಾನ ಹಕ್ಕನ್ನೂ, ಹರಿಜನ ರಿಗೆ ದೇವಸ್ಥಾನಪ್ರವೇಶವನ್ನೂ, ಬಡವರಿಗೆ ಮೂರು ಹೊತ್ತು ಊಟ ವನ್ನೂ ಕೊಡದಿರುವುದು ನ್ಯಾಯವೆಂದೂ ಈ ಕರ್ಮಭಕ್ತರ ಬಲವಾದ ನಂಬುಗೆ. ಇಂತಹ ಮೂಢಜನರು ನಮ್ಮ ಸಮಾಜದಲ್ಲಿ ತುಂಬಿರುವುದು ದುಃಖಕರವಾದ ಸಂಗತಿ. ಸೀತೆ, ಸ್ತ್ರೀ-ಪುರುಷರ ಸಂಬಂಧವನ್ನು ತೆಗೆದು ಕೊಳ್ಳೋಣ. ನಮ್ಮ ದೇಶದಲ್ಲಿ ಸ್ತ್ರೀಯರನ್ನು ಎಷ್ಟು ಹೀನದೃಷ್ಟಿಯಿಂದ ಕಾಣುವರೆಂದು ನಾನು ಬಣ್ಣಿಸಬೇಕಾಗಿಲ್ಲ. ಪುರುಷರಿಗಿರುವ ಎಷ್ಟೋ ಅಧಿಕಾರಗಳು ಸ್ತ್ರೀಯರಿಗೆ ನಿರಾಕರಿಸಲ್ಪಟ್ಟಿವೆ. ಪುರುಷನು ಎಷ್ಟು ಸಲ ಬೇಕಾದರೂ ಮದುವೆಯಾಗಬಹುದು. ಒಂದು ಅಂಗಿ ಕಳಚಿ ಬೇರೊಂ- ದನ್ನು ಧರಿಸುವಂತೆ, ಒಬ್ಬಳನ್ನು ತ್ಯಜಿಸಿ ಬೇರೊಬ್ಬಳನ್ನು ವರಿಸಬಹುದು. ಇಷ್ಟು ಅಧಿಕಾರವೂ ಸಾಲದೆ ಹೋದರೆ, ಅವನು ವೇಶ್ಯೆಯರೊಡನೆ ಸಂಬಂಧವನ್ನಿಟ್ಟುಕೊಂಡಿರಬಹುದು. ಹೊರಗೆ ರೋಗ ಸಂಪಾದಿಸಿಕೊಂಡು, ಪತಿವ್ರತೆಯಾದ ಪತ್ನಿಗೆ ಪ್ರಸಾದವನ್ನನುಗ್ರಹಿಸಿ, ಆಕೆಯನ್ನು ನರಳಿಸ

ಬಹುದು. ಆದರೆ ಸ್ತ್ರೀಯರ ಸ್ಥಿತಿ ಮಾತ್ರ ವಿಷಾದಕರವಾಗಿದೆ. ಸಣ್ಣ ಪ್ರಾಯದಲ್ಲಿ ಹೆತ್ತವರು ಕುರೂಪಿಯೊ, ಮುದುಕನೊ, ರೋಗಿಷ್ಠನೊ ಆದವನ ಕೈಗೆ ಅವರನ್ನಿತ್ತರೆಂದರೆ, ಅವರು ಪತಿಯೇ ಪರದೈವವೆಂದು ಭಾವಿಸಿ, ಆ ಪತಿಯ ಅನಾಚಾರಕ್ಕೊ ಅತ್ಯಾಚಾರಕ್ಕೊ ಬಲಿಯಾಗಿ, ಉಸಿರೆತ್ತದಿರಬೇಕು. ಪರಪುರುಷನನ್ನು ಕಣ್ಣೆತ್ತಿ ನೋಡಕೂಡದು. ಪತಿಯ ದಾಸಿಯಾಗಿದ್ದುಕೊಂಡು, ಮಕ್ಕಳನ್ನು ಹೆತ್ತು ಹೆತ್ತು ಸತ್ತುಹೋಗಬೇಕೇ ವಿನಾ, ಅವರಿಗೆ ಬೇರೆ ಯಾವ ವಿಧಧ ಸುಖವನ್ನೂ ಅನುಭವಿಸುವ ಅಧಿಕಾರವಿಲ್ಲ. ಅವರ ಕರ್ಮಾನುಸಾರವಾಗಿ ಅವರು ಸ್ತ್ರೀಯರಾಗಿ ಹುಟ್ಟಿದುದರಿಂದ ಲೌಕಿಕ ಸುಖವನ್ನನುಭವಿಸುವ ಆಸೆಯನ್ನು ಅವರು ಬಿಟ್ಟೇ ತೀರಬೇಕು. ಸೀತೆ, ಈ ಕರ್ಮವೆಂಬುದರಿಂದ ಹಿಂದಿನವರು ತಮ್ಮ ಸ್ವಾರ್ಥವನ್ನು ಚೆನ್ನಾಗಿ ಸಾಧಿಸಿರುವರೆಂದು ನಾನು ಭಾವಿಸುತ್ತೇನೆ. ಬೊಂಬಾಯಿ ಮೊದಲಾದ ದೊಡ್ಡ ಶಹರುಗಳಲ್ಲಿ, ಗಿರಣಿಗಳಲ್ಲಿ ಕೆಲಸ ಮಾಡುವ ಸ್ತ್ರೀಯರು, ಗಿರಣಿಗೆ ಹೋಗುವಾಗ, ತಮ್ಮ ಮಕ್ಕಳಿಗೆ ಒಂದಿಷ್ಟು ಅಫೀಮನ್ನು ತಿನ್ನಿಸಿ ಹೋಗುವುದುಂಟಂತೆ! ಇದರಿಂದಾಗಿ ಆ ಮಕ್ಕಳು ತಾಯಂದಿರು ಸಾಯಂಕಾಲ ಹಿಂದಿರುಗಿ ಬರುವ ವರೆಗೂ ಸತ್ತ ಹಾಗೆ ಬಿದ್ದುಕೊಂಡಿರುತ್ತವಂತೆ! ಪಾಪ! ಅವುಗಳಿಗೆ ಹಾಗೆ ಅಫೀಮು ಕೊಡದಿದ್ದರೆ, ಅವು ಹಸಿವಿಂದ ಅತ್ತು ಅತ್ತು ಸತ್ತುಹೋದಾವು! ಸೀತೆ, ನಮ್ಮ ಸಮಾಜದಲ್ಲಿರುವ ಈ ಕರ್ಮಭಕ್ತಿಯೆಂಬುದು ಆ ಅಫೀಮಿನಂತೆಂದು ತಿಳಿ. ಸ್ತ್ರೀಯರೂ ಹರಿಜನರೂ ಬಡವರೂ ಹೆಚ್ಚಿನ ಸ್ವಾತಂತ್ರ್ಯಕ್ಕಾಗಿ ಹಾತೊರೆದು ಕೇಗೆಡದಂತೆ, ಅವರನ್ನು ನಿಶ್ಚೇಷ್ಟಿತರಾಗಿ ಮಾಡುವುದೇ ಕರ್ಮಭಕ್ತಿಯೆಂಬ ಈ ಅಫೀಮು! ಪುರುಷನು ಎಷ್ಟು ಸಲ ವಿದುರನಾದರೂ, ಪುನಃ ವಿವಾಹವಾಗಬಹುದು; ಆದರೆ ಸ್ತ್ರೀಯು ವಿಧವೆಯಾದಳೆಂದರೆ ಎಲ್ಲವೂ ತೀರಿತು. 'ಅವಳು ಪೂರ್ವಜನ್ಮದಲ್ಲಿ ಪತಿಪತ್ನಿಯರನ್ನು ಅಗಲಿಸಿರಬೇಕು; ಇಲ್ಲವಾದರೆ ಅವಳು ವಿಧವೆಯಾಗುತ್ತಿರಲಿಲ್ಲ.' ಇದಕ್ಕಿಂತ ಹೆಚ್ಚು ಹುಚ್ಚು ಕಲ್ಪನೆಯು ಬೇರೊಂದಿದೆಯೆ? ಬಾಲವಿಧವೆಯರ ಪ್ರಶ್ನೆಗೆ ನಾನು ತುಂಬಾ ಗಮನ ಕೊಟ್ಟಿರುವೆನು. ವಿಧವಾವಿವಾಹವು

ಅವಶ್ಯವೆಂಬುದಾಗಿ ನಾನು ಮನಗಂಡಿರುವೆನು. ಸೀತೆ, ವಿಧವಾವಿವಾಹದ ಆವಶ್ಯಕತೆಯ ವಿಷಯದಲ್ಲಿ ನಿನಗೆ ಸಂಶಯವಿದೆಯೆ?"

"ವಿಧವಾವಿವಾಹಕ್ಕೆ ನನ್ನ ಸಂಪೂರ್ಣ ಸಹಾನುಭೂತಿಯಿದೆ."

"ಸೀತೆ, ನಾನು ಹೇಳುವುದನ್ನು ವಿಪರೀತವಾಗಿ ತಿಳಿದುಕೊಳ್ಳಬೇಡ. ನೀನೇಕೆ ಪುನರ್ವಿವಾಹಮಾಡಿಕೊಳ್ಳಕೂಡದು?"

"ಇದೊಳ್ಳೆ ಪ್ರಶ್ನೆ! ವಿಧವಾವಿವಾಹಕ್ಕೆ ನನ್ನ ಸಹಾನುಭೂತಿಯಿದೆ ಯೆಂದ ಮಾತ್ರಕ್ಕೆ ನಾನು ಪುನರ್ವಿವಾಹಕ್ಕೆ ಸಿದ್ಧಳಿದ್ದೇನೆಂದು ಭಾವಿಸ ಲಾಗದು. ವಿಧವಾವಿವಾಹವು ಅವಶ್ಯವೆಂದು ಎಲ್ಲರೂ ಒಪ್ಪಬಹುದಾದರೂ ಪುನರ್ವಿವಾಹವನ್ನೊಲ್ಲದ ವಿಧವೆಗೆ ಬಲಾತ್ಕಾರದಿಂದ ಮದುವೆ ಮಾಡಿಸ ಬೇಕೆಂದರೆ ಯಾರೂ ಒಪ್ಪತಕ್ಕ ಮಾತಲ್ಲ. ನಾನು ಹೇಳುವುದೇನೆಂದರೆ ಒಬ್ಬ ವಿಧವೆಯು ವಿವಾಹವಾಗಬೇಕೆಂದಿದ್ದರೆ, ಸಮಾಜವು ಆಕ್ಷೇಪವೆತ್ತ ಕೂಡದು."

"ವಿಧವೆಯವರು ಪುನರ್ವಿವಾಹಕ್ಕೆ ಸಮ್ಮತಿಸದಿರುವುದು ಆತ್ಮ ಸಂತೋಷದಿಂದಲೆ? ಅಥವಾ ಸಮಾಜಕ್ಕೆ ಹೆದರಿಯೆ? ನೀನು ಪುನರ್ವಿವಾ ಹವನ್ನೊಲ್ಲೆಯಾದರೆ, ಅದೇಕೆಂದು ತಿಳಿಸಲಾರೆಯಾ?

"ನನ್ನನ್ನು ಆರೋಗ ದೃಢಕಾಯನಾದ ಯುವಕನಿಗೆ ಕೊಟ್ಟಿದ್ದರು. ಅಂತಹ ರತ್ನವನ್ನು ಕಳೆದುಕೊಂಡ ನನಗೆ ಇನ್ನಾಗಬೇಕಾದುದೇನು? ನನ್ನ ಶೇಷಾಯುಷ್ಯವನ್ನೆಲ್ಲಾ ಲೋಕಸೇವೆಯಲ್ಲೆ ಕಳೆಯಬೇಕೆಂದು ನಿಶ್ಚಯಿ ಸಿರುತ್ತೇನೆ."

"ಇದೆಂತಹ ಮಾತು! ಸೀತೆ, ನಿನ್ನಂತಹ ಸ್ವಾರ್ಥಿಯೂ, ಸುಖಾಭಿ ಲಾಷಿಯೂ ಬೇರೊಬ್ಬರಿಲ್ಲವೆಂದು ನಾನು ಎದೆತಟ್ಟಿ ಹೇಳಬಲ್ಲೆ."

"ಏನು! ನಾನು ಸ್ವಾರ್ಥಿಯೆ! ಸುಖಾಭಿಲಾಷಿಯೆ! ಮಾಸ್ತರರೇ, ನಿಮ್ಮ ಮಾತನ್ನು ಕೇಳಿ ನನಗೆ ನಿಜವಾಗಿಯೂ ಆಶ್ಚರ್ಯವಾಗುವುದು.

ನಾನು ಪುನರ್ವಿವಾಹಕ್ಕೆ ಸಮ್ಮತಿಸಿದ್ದರೆ, ನನ್ನನ್ನು ನೀವು ವಿಷಯಸುಖಾಭಿಲಾಷಿಯೆಂದು ಕರೆಯಬಹುದಿತ್ತು. ಆದರೆ ನಾನು ಎಲ್ಲವನ್ನೂ ತ್ಯಜಿಸಿ ವಿರಕ್ತಿ ಮಾರ್ಗವನ್ನನುಸರಿಸುತಿದ್ದರೂ ನಾನು ಸ್ವಾರ್ಥಿಯೇ?"

"ನಿಶ್ಚಯವಾಗಿಯೂ ಅಹುದು. ಈ ಸಂದರ್ಭದಲ್ಲಿ ನಿನ್ನ ಕರ್ತವ್ಯವೇನೆಂಬುದನ್ನು ವಿಚಾರಿಸಿ ನೋಡು. ಪಾಶ್ಚಾತ್ಯರಂತೆ ನಮ್ಮಲ್ಲಿಯೂ ವಿಧವಾವಿವಾಹಕ್ಕೆ ಯಾವ ತರದ ಆಕ್ಷೇಪವೂ ಇಲ್ಲದಿರುತಿದ್ದರೆ, ನಿನ್ನಂತಹ ಸುಶಿಕ್ಷಿತ ಸ್ತ್ರೀಯು ಹೇಗೆ ವರ್ತಿಸಿದರೂ ನನ್ನಡ್ಡಿಯಿರಲಿಲ್ಲ. ಆದರೆ ಇಲ್ಲಿ ವಿಧವಾವಿವಾಹವು ಹೆಚ್ಚಿನ ಪ್ರಚಾರದಲ್ಲಿಲ್ಲ. ವಿಧವೆಯರು ಮದುವೆಯಾದರೆ, ಜಾತಿಗೆಡುವ ಭೀತಿಯಿದೆ. ಸಮಾಜದ ಶಿಕ್ಷೆಗೆ ಎದೆಗೊಡಬೇಕಾದ ಸಂಭವವಿದೆ. ಇದಕ್ಕೆಲ್ಲಾ ಹೆದರಿ, ನೀನು ಹಿಂಜರಿದು, ಪುನರ್ವಿವಾಹವನ್ನೊಲ್ಲೆಯೆಂದಾದರೆ ನೀನು 'ಅಂಜುಬುರುಕಿ'ಯೆಂದೂ ನಾನು ಹೇಳಲೇಬೇಕಾಗುವುದು. ರಣರಂಗದಲ್ಲಿ ಹತ್ತಾರು ಜನರ ತಲೆಯನ್ನು ಚೆಂಡಾಡಿದವನು ವೀರನೆಂದು ನಾನೆನ್ನುವುದಿಲ್ಲ. ಆದರೆ, ಎಂತಹ ಕಷ್ಟ ಬಂದರೂ ಎದೆಗೆಡದೆ, ಧೈರ್ಯದಿಂದ ಮುಂದೊತ್ತಿ, ನ್ಯಾಯವೆಂದು ತೋರಿದುದನ್ನು ಸಾಧಿಸುವವನೇ ನಿಜವಾದ ವೀರ. ಜನರೇನೆನ್ನುವರೊ ಎಂಬ ಹೆದರಿಕೆಯಿಂದಾಗಿ, ಮನಸ್ಸಾಕ್ಷಿಗೆ ನ್ಯಾಯವೆಂದು ತೋರಿದುದನ್ನು ಮಾಡಲು ಹಿಂಜರಿಯುವವನೇ ಹೇಡಿ. ಸೀತೆ, ಬಹಿಷ್ಕಾರದ ಹೆದರಿಕೆಯಿಂದಾಗಿ ನೀನು ನಿನ್ನ ಮನಸ್ಸಿಗೆ ಯೋಗ್ಯವೆಂದು ತೋರುವುದನ್ನು ಮಾಡದೆ ಹಿಂದುಳಿದು ಹೇಡಿಯೆಂದೆನಿಸಿಕೊಳ್ಳುವೆಯಾ? ಎಲ್ಲರೂ ನಿನ್ನನ್ನು ಪತಿವ್ರತಾಶಿರೋಮಣಿಯೆಂದೂ ಆದರ್ಶ ಸ್ತ್ರೀಯೆಂದೂ ಸ್ವಾರ್ಥರಹಿತಳೆಂದೂ ಹೊಗಳಬಹುದು. ಆದರೆ ನಿನ್ನ ಅಂತರಂಗವನ್ನು ಪರಿಶೋಧಿಸು. ಆಗ ನಿನಗೆ ತಿಳಿಯುವುದು. ನೀನು 'ಕರೇಜ್ ಒಫ್ ಕನ್‌ವಿಕ್ಶನ್ (courage of conviction)' ಇಲ್ಲದ ಹೇಡಿಯೆಂದು! ನೀನು ಸ್ವಾರ್ಥಿಯಲ್ಲವೆಂದು ಭಾವಿಸುವೆಯಾ? ಪ್ರಕೃತಿ ಧರ್ಮವನ್ನು ನೋಡು. ಪ್ರತಿಯೊಂದು ಮರವೂ, ಬಳ್ಳಿಯೂ ಕಾಲಧರ್ಮಕ್ಕನುಗುಣವಾಗಿ ಚಿಗುರನ್ನೂ, ಹೂವನ್ನೂ, ಹಣ್ಣನ್ನೂ ಪಡೆಯುತ್ತಿರುತ್ತದೆ. ಪ್ರಾಣಿವರ್ಗವೂ ಸಂತತಿಯನ್ನು

ವೃದ್ಧಿಗೊಳಿಸುತ್ತಿರುತ್ತದೆ. ಈ ನಿಸರ್ಗ ನಿಯಮಕ್ಕೆ ವಿರೋಧ ವಾಗಿ ವರ್ತಿಸಬೇಕೆಂದು ಹವಣಿಸುತ್ತಿರುವ ನೀನೆಷ್ಟರವಳು! ನಿನ್ನಿಂದ ಹುಟ್ಟಬೇಕಾಗಿರುವ ಭಾವೀ ಜನಾಂಗವನ್ನು ಇಲ್ಲದಂತೆ ಮಾಡಲು ಬಗೆ ಯುವೆಯಾ? ನಿನ್ನ ರೂಪಸದ್ಗುಣಗಳನ್ನು ನಿನ್ನೊಂದಿಗೇನೆ ಮಸಣಕ್ಕೆ ಕೊಂಡೊಯ್ಯುವೆಯಾ? ಹಾಗೆ ಮಾಡಲು ನಿನಗೆ ಅಧಿಕಾರವೆಲ್ಲಿಯದು? ನಿನ್ನ ಪ್ರತಿಮೂರ್ತಿಯಲ್ಲಿ ನಿನ್ನ ರೂಪಸದ್ಗುಣಗಳನ್ನು ಆವಾಹನೆಮಾಡ ಲೊಪ್ಪದ ನೀನು ಎಂತಹ ಸ್ವಾರ್ಥಿ! ಎಂತಹ ಲೋಭಿ! ನೀನು ಸಿಕ್ಷಿತೆ ಯು ವಾಗಿಯೂ ಸುಖಾಭಿಲಾಷಿ. ನೀನು ಪುನರ್ವಿವಾಹವಾದರೆ, ಬಹಿಷ್ಕೃತೆ ಯಾಗಿ, ನಾನಾ ತರದ ಕಷ್ಟಗಳನ್ನನುಭವಿಸಿ ಆತ್ಮಸಮರ್ಪಣೆ ಮಾಡಲೂ ಬೇಕಾಗಬಹುದು. ಅದರ ಬದಲಿಗೆ ಈಗ ಇರುವ ಹಾಗೆಯೆ ಸುಖ ದಿಂದಿರಬೇಕೆಂದು ಬಯಸುತ್ತಿರುವೆ."

"ಮಾಸ್ತರರೆ, ನನ್ನ ಅಜ್ಞಾನವನ್ನು ದೂರಗೊಳಿಸಿದಿರಿ ಈಗ ನಾನು ಮಾಡಬೇಕಾದುದೇನೆಂಬುದನ್ನು ದಯವಿಟ್ಟು ತಿಳಿಸಿ".

"ನಾನು ಹೇಳುವುದಾದರೆ ನಿನ್ನಂತಹ ವಿದ್ಯಾವತಿಯೂ ಸುಸಂಸ್ಕೃ ತೆಯೂ ಪುನರ್ವಿವಾಹವಾಗಲೆ ಬೇಕು. ವಿಧವಾವಿವಾಹವು ಆಕ್ಷೇಪ ಣೀಯವೆಂದು ನಿನ್ನಭಿಪ್ರಾಯವಿದ್ದರೆ ನೀನು ಮದುವೆಯಾಗೆಂದು ನಾನು ಹೇಳುತ್ತಿರಲಿಲ್ಲ. ಅದಕ್ಕಾಗಿಯೆ ನಾನು ಮೊದಲಾಗಿ ವಿಧವಾವಿವಾಹದ ವಿಷಯದಲ್ಲಿ ನಿನ್ನ ಮತವೇನೆಂದು ಕೇಳಿದುದು."

"ಈಗ ನಾನು ನನ್ನ ಕರ್ತವ್ಯವನ್ನು ಸರಿಯಾಗಿ ಕಂಡುಕೊಂಡೆ. ಮದುವೆಯಾಗಲು ನನ್ನ ಆಕ್ಷೇಪವೇನೂ ಇಲ್ಲ."

"ಸುಂದರೀ, ನಿನಗೆ ನಾನು ಮನಸೋತಿರುವೆ. ನನ್ನನ್ನು ನೀನು ಚೆನ್ನಾಗಿ ಅರಿತಿರುವೆ. ನಿನ್ನಿಷ್ಟವಿದ್ದರೆ ವಿವಾಹಕ್ಕೆ ಸಮ್ಮತಿಕೊಡು. ನನ್ನ ಮೇಲೆ ನಿನ್ನ ಪ್ರೇಮವಿಲ್ಲವಾದರೆ ತಿಳಿಸು. ನನಗದರಿಂದ ಎಳ್ಳಷ್ಟೂ ಬೇಸರವಿಲ್ಲ. ನನಗಿಂತ ಯೋಗ್ಯರಾದವರು ಬೇಕಷ್ಟು ಮಂದಿ ಇರುವರು.

ನಿನಗಿಷ್ಟಬಂದವರನ್ನು ವರಿಸಿ ಸುಖದಿಂದ ಬಾಳು. ನನ್ನ ವಿನಂತಿಗೆ ಉತ್ತರ ವೀಯುವ ಕೃಪೆಮಾಡು. ನೀನೀಗಲೆ ಉತ್ತರಕೊಡಬೇಕಾಗಿಲ್ಲ. ಬೇಕಾದಷ್ಟು ಯೋಚಿಸು. ನಿನ್ನ ಪ್ರತ್ಯುತ್ತರವನ್ನು ಕಾದು ನಾನು ಬೇಕಾದರೆ ಮರಣ ಪರ್ಯಂತವೂ ಬ್ರಹ್ಮಚಾರಿಯಾಗಿಯೆ ಇರುತ್ತೇನೆ."

ಇಬ್ಬರೂ ಮಾತನಾಡದೆ ಮುನ್ನಡೆದರು. ಗೋವಿಂದರಾಯರ ಮಾತನ್ನು ಕೇಳಿ ಸೀತೆಯು ಹರ್ಷಪುಳಕಿತೆಯಾದಳು. ತನ್ನ ವಿಷಯದಲ್ಲಿ ಅವರಿಗಿದ್ದ ಅಂತಃಕರಣಕ್ಕಾಗಿ ಮನಸ್ಸಿನಲ್ಲೆ ಅವರನ್ನು ಕೊಂಡಾಡಿದಳು. ಆದರೆ ಅನಂತನ ಪ್ರೇಮಪಾಶದಿಂದ ಬಂಧಿತೆಯಾಗಿದ್ದುದರಿಂದ ಗೋವಿಂದ ರಾಯರಿಗೆ ಕೂಡಲೆ ಉತ್ತರ ಕೊಡಲು ಅವಳಿಂದಾಗಲಿಲ್ಲ. ಅನಂತನು ಲೀಲೆಯನ್ನಾಗಲಿ ಬೇರೆ ಯಾರನ್ನಾಗಲಿ ಮದುವೆಯಾದ ಮೇಲೆ ಗೋವಿಂದ ರಾಯರಿಗೆ ತನ್ನ ಸಮ್ಮತಿ ಕೊಡುವುದು ಯುಕ್ತವೆಂದು ಅವಳು ಭಾವಿಸಿ, ಪ್ರಕಾಶವಾಗಿ "ಮಾಸ್ತರರೆ, ಈಗ ನನ್ನ ನಿಶ್ಚಿತಾಭಿಪ್ರಾಯವನ್ನುತಿಳಿಸಲಾರೆ. ನನ್ನನ್ನು ಕ್ಷಮಿಸಿ. ನಮ್ಮ ಲೀಲೆಯ ಮದುವೆಯಾಗುವ ವರೆಗೆ, ನೀವು ನನ್ನ ಮೇಲೆ ಕೃಪೆಯಿಟ್ಟು, ನನಗೆ ಸಮಯ ದಯಪಾಲಿಸಬೇಕೆಂದು ಪ್ರಾರ್ಥಿಸುತ್ತೇನೆ" ಎಂದಳು.

ಗೋವಿಂದರಾಯರು ಸಂತೋಷದಿಂದೊಪ್ಪಿದರು. ಸೀತೆಯನ್ನು ಅವಳ ಮನೆಗೆ ಮುಟ್ಟಿಸಿ, ಲಘುಹೃದಯದಿಂದ ಮುನ್ನಡೆದರು.

ಲೀಲೆಯು ಎಂದಿನಂತೆ ಸೀತೆಯ ಕ್ಷಮಾಪಣೆ ಬೇಡಿದಳು. ಅನಂತನು ಬಂದು ಹೋದನೇನೆಂದು ಸೀತೆಯು ವಿಚಾರಿಸಲು, ಲೀಲೆಯು ಎಲ್ಲವನ್ನೂ ವಿವರಿಸಿದಳು— ಲೀಲೆಯು ಅಳುತ್ತ ಮನೆಗೆ ಹಿಂದಿರುಗಿ, ಒಂದು ಮೂಲೆಯಲ್ಲಿ ಕುಳಿತುಕೊಂಡು ಕಣ್ಣೀರು ಸುರಿಸುತಿದ್ದಳು. ಎಷ್ಟು ಹೊತ್ತು ಹಾಗೆ ಕುಳಿತಿದ್ದಳೊ ಅವಳಿಗೇ ಗೊತ್ತಿಲ್ಲ. ಅನಂತನು ಬಂದು, 'ಲೀಲೆ, ಅಳುವೆಯೇಕೆ? ಸೀತೆಯು ಹೊಡೆದಳೇನು?' ಎಂದು ಕೇಳಿದಾಗಲೆ ಅವಳಿಗೆ ಎಚ್ಚರವಾದುದು. ಲೀಲೆಯು ಸುಳ್ಳು ಹೇಳಲಾರದೆ ನಡೆದ ಸಂಗತಿ

ಯೆಲ್ಲವನ್ನೂ ತಿಳಿಸಿದಳು. ಅನಂತನು ನಿಟ್ಟುಸಿರಿಟ್ಟು, ಕಳೆಗುಂದಿದ ಮುಖವುಳ್ಳವನಾಗಿ, ಐದಾರು ನಿಮಿಷ ಅಲ್ಲೇ ಕುಳಿತಿದ್ದು, ತನಗೊಬ್ಬ ಸ್ನೇಹಿತನ ಮನೆಗೆ ಹೋಗಲಿರುವುದಾಗಿ ಹೇಳಿ, ಹೋಗಿಯೇ ಬಿಟ್ಟನು.

ಇದನ್ನು ಕೇಳಿ ಸೀತೆಯ ಹೃದಯಕ್ಕೆ ಕೊಂಚ ವೇದನೆಯಾದರೂ, ಮನಸ್ಸಿಗೆ ಸಮಾಧಾನವಾಯಿತು. ಮರುದಿನವೂ ತಾನು ಗೋವಿಂದರಾಯರೊಂದಿಗೆ ಹೋಗಿಬಿಟ್ಟರೆ, ತನ್ನ ಯುಕ್ತಿಯು ಫಲಿಸಿ, ಇಷ್ಟಾರ್ಥಸಿದ್ಧಿಯಾಗುವುದೆಂದು ಅವಳು ನಂಬಿದಳು.

---

## ೧೦

ಮರುದಿನ ಸಾಯಂಕಾಲ ಅನಂತನು ಹೋದಾಗ, ಲೀಲೆಯೊಬ್ಬಳೆ ಅವನನ್ನು ಸ್ವಾಗತಿಸಿದಳು. ಸೀತೆಯೂ, ಗೋವಿಂದರಾಯರೂ ಹೊರಟಾಗ, ತಾನೂ ಬರುವೆನೆಂದು ಹೇಳಲು, ಸೀತೆಯು ಆಕ್ಷೇಪಿಸಿದಳೆಂದೂ ತಾನು ಕೂಡಲೆ ಹಿಂದಿರುಗಿದೆನೆಂದೂ ಲೀಲೆಯು ತಿಳಿಸಿದಳು.

ಸೀತೆಗೆ ಗೋವಿಂದ ಮಾಸ್ಟರರಲ್ಲಿ ಅನುರಾಗವಿರಬಹುದೆಂದು ಹಿಂದಿನ ದಿನವೆ ಅನಂತನಿಗೆ ಸಂಶಯ ಬಂದಿತ್ತು; ಈಗ ಆ ಸಂಶಯವು ದೃಢನಂಬುಗೆಯಾಗಿ ಪರಿಣಮಿಸಿತು. ಇನ್ನು ತನ್ನ ಪ್ರೇಮವೃಕ್ಷವನ್ನು ಬುಡಸಹಿತ ಕಡಿದುಹಾಕಬೇಕಾಗಬಹುದಾಗಿ ಅವನು ಭಾವಿಸಿದ.

ಅನಂತನು ಅಲ್ಲಿದ್ದ ಕುರ್ಚಿಯಲ್ಲಿ ಕುಳಿತು, ಲೀಲೆಯನ್ನೆ ನೋಡತೊಡಗಿದ. ಸೀತೆಯ ಸೌಂದರ್ಯದಿಂದ ಮುಗ್ಧನಾಗಿದ್ದ ಅವನು ಲೀಲೆಯ ರೂಪವನ್ನು ಚೆನ್ನಾಗಿ ಪರಿಶೀಲಿಸಿರಲಿಲ್ಲ. ಲೀಲೆಯು ಸೀತೆಗಿಂತಲೂ ಮಿಗಿಲಾದ ಸುಂದರಿಯೆಂದು ಅವನಿಗೆ ತೋರತೊಡಗಿತು. ತಾನು ಲೀಲೆಯನ್ನು ವರಿಸಲು ಸಮಾಜದ ಆಕ್ಷೇಪವಿಲ್ಲ; ಎಲ್ಲರೂ ಸಂತೋಷ

ದಿಂದೊಪ್ಪಿಕೊಳ್ಳುವರು. ತನಗೇನೂ ಪ್ರಾಯವಿಾರಿಲ್ಲ. ಬಿ. ಎಲ್. ಮುಗಿಸಿ ತಾನು 'ಎಡ್ವೊಕೇಟ್' ಆಗಿ ಬರುವ ಹೊತ್ತಿಗೆ ಲೀಲೆಯೂ ವಿವಾಹ ಯೋಗ್ಯವಾದ ವಯಸ್ಸನ್ನು ಹೊಂದುವಳು. ಈಕೆಯೇ ತನಗೆ ಯೋಗ್ಯ ಪತ್ನಿಯೆಂದು ನಿರ್ಧರಿಸಿ, ಅನಂತನು, "ಲೀಲೆ, ನಾವೂ ಕೊಂಚ ಅಡ್ಡಾಡಿಕೊಂಡು ಬರೋಣವೆ?" ಎಂದು ಕೇಳಿದ.

"ಅವಶ್ಯವಾಗಿ ಹೋಗೋಣ. ಅಮ್ಮನಿಗೆ ತಿಳಿಸಿ, ಈಗಲೆ ಬಂದೆ."

ಲೀಲೆಯು ಕಣ್ಮರೆಯಾದೊಡನೆ ಸೀತೆಯ ಮೂರ್ತಿಯು ಅನಂತನ ಕಣ್ಣೆದಿರು ನಿಂತಂತಾಯಿತು. ಅವನು ಯೋಚನಾಮಗ್ನನಾದ—'ಸೀತೆಯನ್ನು ಬಿಟ್ಟು ನಾನು ಹೇಗೆ ಬದುಕಿಕೊಂಡಿರಲಿ? ಆಕೆಯ ಪ್ರಥಮ ದರ್ಶನದಿಂದಲೆ ನಾನು ಮಂತ್ರಮುಗ್ಧನಂತಾಗಿದ್ದೇನೆ. ಆಕೆಯು ಗೋವಿಂದ ರಾಯರರನ್ನು ಪ್ರೀತಿಸುವುದು ನಿಜವೆ? ಆಕೆಯನ್ನೆ ಕೇಳಲೆ? ಇತ್ತೀಚೆಗೆ ಆಕೆಯ ವರ್ತನೆಯಲ್ಲಿ ತುಂಬಾ ಹೆಚ್ಚುಕಡಿಮೆಯಾಗಿರುವುದೇತರಿಂದ? ನಾನು ಹೊಸತಾಗಿ ಬಂದುದರಿಂದ ಆಕೆಯು ನನ್ನಿದಿರು ಸಭ್ಯಳಂತೆ ವರ್ತಿಸಿದಳೆ? ಈಗ ಆಕೆಯ ನಿಜಸ್ವಭಾವವು ಹೊರಬಿತ್ತೆ? ಹಾಗೆಂದಿಗೂ ಇರಲಿಕ್ಕಿಲ್ಲ. ಸೀತೆಯು ಸೌಮ್ಯಸ್ವಭಾವದವಳೆಂದು ನನ್ನ ಅಂತರಾತ್ಮವು ಹೇಳುತ್ತಿದೆ. ಹಾಗಾದರೆ ಇದೆಲ್ಲಾ ನಟನೆಯೆ? ಹೀಗೆ ನಟಿಸುವುದರಿಂದ ಆಕೆಗೆ ಸಿಗುವ ಪ್ರಯೋಜನವೇನು? ಒಂದು ವೇಳೆ ಆಕೆಯ ನಿಜಸ್ವಭಾವವೆ ಹೀಗಿದ್ದರೂ ಚಿಂತೆಯಿಲ್ಲ. ನಾನು ಆಕೆಯನ್ನೆ ವರಿಸುವೆನು. ಆಕೆಗೆ ನನ್ನ ಪ್ರೇಮದ ಸಂಗತಿಯನ್ನು ನಾಳೆಯೆ ತಿಳಿಸುತ್ತೇನೆ. ಇಷ್ಟವಿದ್ದರೆ ಸಮ್ಮತಿಸಲಿ. ಇಲ್ಲವಾದರೆ ಗೋವಿಂದರಾಯರನ್ನೆ ಮದುವೆಯಾಗಲಿ.'

ಅನಂತನು ಹೀಗೆ ಯೋಚನಾಮಗ್ನನಾಗಿ ಕುಳಿತಿರಲು, ಲೀಲೆಯು ಅಲ್ಲಿಗೆ ಬಂದು, ಸುಮ್ಮನೆ ನಿಂತುಕೊಂಡು, ಕಟ್ಟಕಡೆಗೆ, "ಋಷಿವರ್ಯರ ತಪೋಭಂಗ ಮಾಡಿದುದಕ್ಕಾಗಿ ನನ್ನ ಮೇಲೆ ಕೋಪಗೊಂಡು ಶಾಪಕೊಡಲಾಗದು! ಪಾಮರಳಾದ ನನ್ನನ್ನು ಕ್ಷಮಿಸಿ ಅನುಗ್ರಹಿಸುವ ಕೃಪೆಮಾಡಬೇಕು. ತಾವು ನಿಗ್ರಹಾನುಗ್ರಹಸಮರ್ಥರು! ತಮ್ಮೊಂದಿಗೆ ಅಡ್ಡಾಡಿ

ಬರಲು ನನ್ನನ್ನು ಆಜ್ಞಾಪಿಸೋಣಾಯಿತು. ಇನ್ನು ಸಮಯ ಮೀರುವು ದೆಂದು ಅಲ್ಪಮತಿಯಾದ ನನಗೆ ತೋರಿದುದರಿಂದ, ಹಿಂದುಮುಂದು ನೋಡದೆ, ದುಡುಕಿ ಈ ಅಕೃತ್ಯವನ್ನು ಮಾಡಿದಂಥವಳಾದೆ" ಎಂದು ಹೇಳಿ ನಸುನಕ್ಕಳು.

ಅನಂತನು ಮಂದಹಾಸದಿಂದೊಡಗೂಡಿ, "ಲೀಲೆ, ಚೆನ್ನಾಗಿ ಮಾತಾ ಡಿದೆ. ತಿರುಗಾಡಲು ಹೋಗೋಣ. ನೀನು ಅಮ್ಮನೊಡನೆ ಹೇಳಿ ಬಂ ದೆಯಾ?" ಎಂದು ಕೇಳಿದ.

"ನಾನು ಹೇಳಿಬಂದು ಹತ್ತು ಹದಿನೈದು ನಿಮಿಷವಾಯಿತು."

"ಇಷ್ಟು ಹೊತ್ತೂ ಸುಮ್ಮನೆ ನಿಂತೆಯೇಕೆ? ನನ್ನನ್ನು ಮೊದಲೇ ಮಾತನಾಡಿಸಬೇಕಿತ್ತಲ್ಲವೆ?"

"ಮಾತನಾಡಿಸುವೆನೆಂದು ಮೊದಲು ಯೋಚಿಸಿದೆ. ಆದರೆ, ಭಾವಯ್ಯಾ, ನೀನು ಸಮಾಧಿಸ್ಥನಾಗಿದ್ದೆ! ದೇವರು ಕೂಡಲೆ ಪ್ರತ್ಯಕ್ಷ ವಾಗಬಹುದು. ಶಂಖಚಕ್ರಗದಾಪದ್ಮಗಳನ್ನು ಧರಿಸಿದ, ವೈಜಯಂತೀ ಮಾಲೆಯಿಂದ ಅಲಂಕೃತನಾದ, ಗರುಡವಾಹನ ಶ್ರೀಮನ್ನಾರಾಯಣನನ್ನು ಕಣ್ತುಂಬ ನೋಡಿ, ಜನ್ಮಸಾರ್ಥಕಗೊಳಿಸಬೇಕೆಂಬ ಮಹದುದ್ದೇಶದಿಂದ ಕೂಡಿದವಳಾಗಿ, ಭಕ್ತಿಪರವಶತೆಯಿಂದ ಕೈಮುಗಿದು ನಿಂತೆ. ಆದರೆ ಭಗ ವಂತನು ಪ್ರತ್ಯಕ್ಷನಾಗಲಿಲ್ಲ; ನೀನು ಸಮಾಧಿಯಿಂದೇಳಲಿಲ್ಲ! ಇನ್ನು ಸುಮ್ಮನಿದ್ದರೆ ತಿರುಗಾಟವು ಅಸಾಧ್ಯವೆಂದು ಭಾವಿಸಿ ನಿನ್ನನ್ನೆಚ್ಚರ ಗೊಳಿಸಿದೆ."

"ಲೀಲೆ, ಹಾಗಾದರೆ ಹೋಗೋಣ. ನೀನು ಕರೆದುಕೊಂಡು ಹೋದತ್ತ ಬರಲು ನಾನು ಸಿದ್ಧ."

ಅನಂತನು ಜೀವಚ್ಛವದಂತೆ ಲೀಲೆಯೊಂದಿಗೆ ನಡೆದ. ಅವನ ಮನಸ್ಸಿ ನಲ್ಲೆಲ್ಲಾ ಸೀತೆಯನ್ನು ಕುರಿತು ಯೋಚನೆಗಳು; ಹೃದಯದಲ್ಲೆಲ್ಲಾ

ಸೀತೆಯ ಮೂರ್ತಿ. ಲೀಲೆಯು ಮಾತಾಡುತ್ತ ಸಾಗಿದ್ದಳು. ಅನಂತನು ಆಗಾಗ 'ಹೂಂ'ಗುಟ್ಟುತಿದ್ದ.

"ಭಾವಯ್ಯಾ, ನೀನು ಉಡುಪಿ ಪರ್ಯಾಯವನ್ನು ನೋಡಲಿಲ್ಲ ವಲ್ಲ! ಇಲ್ಲಿ ಪರ್ಯಾಯದಷ್ಟು ದೊಡ್ಡ ಉತ್ಸವವು ಬೇರೊಂದಿಲ್ಲ."

"ಹೂಂ"

"ಇಲ್ಲಿ ಎಂಟು ಮಠಗಳಿವೆ. ಒಂದೊಂದು ಮಠದವರು ಎರಡೆರಡು ವರ್ಷ ಶ್ರೀ ಕೃಷ್ಣದೇವರ ಸೇವೆಯನ್ನು ಸರದಿ ಪ್ರಕಾರ ನಡೆಸಿಕೊಂಡು ಬರಬೇಕು. ಒಂದು ಮಠದವರೆದ್ದು ಇನ್ನೊಂದು ಮಠದವರು ಕುಳಿತು ಕೊಳ್ಳುವಾಗ ನಡೆಸುವ ಉತ್ಸವವೆ ಪರ್ಯಾಯ. ಇದು ಎರಡೆರಡು ವರ್ಷ ಕ್ಕೊಮ್ಮೆ ಜನವರಿ ತಿಂಗಳಲ್ಲಿ ಬರುವುದು."

"ಹೂಂ"

"ಮೊದಲು ಪ್ರತಿ ಮಠಕ್ಕೂ ಆನೆಯಿತ್ತಂತೆ. ಎಂಟು ಆನೆಗಳೂ ಸಿಂಗರಿಸಲ್ಪಟ್ಟು ಸಾಲಾಗಿ ನಿಲ್ಲುವಾಗ ಚಂದ ತೋರುತಿತ್ತಂತೆ! ಈಗ ಒಟ್ಟಿಗೆ ಒಂದೆರಡು ಆನೆಗಳಿವೆ."

"ಹೂಂ"

ಲೀಲೆಯು ಇನ್ನೂ ಎಷ್ಟೋ ವಿಷಯಗಳನ್ನು ಹೇಳಿದಳು. ಅನಂತನು ಹೂಂಕಾರ ಕೊಡುತಿದ್ದನೆ ವಿನಾ ತನ್ನ ಮಾತನ್ನು ಮನಸ್ಸಿಟ್ಟು ಕೇಳು ತಿದ್ದಿಲ್ಲವೆಂಬುದು ಅವಳಿಗೆ ತಿಳಿಯಿತು. ವಿನೋದಪ್ರಿಯೆಯಾದ ಅವಳು "ನಿನ್ನನ್ನು ಕತ್ತೆಯೆಂದು ಕರೆಯಲೇನು, ಭಾವಯ್ಯಾ?" ಎಂದು ಕೇಳಿದಳು.

"ಹೂಂ"

ಲೀಲೆಯು ಕಿಲಕಿಲನೆ ನಕ್ಕಾಗ ಅನಂತನಿಗೆ ಎಚ್ಚರವಾಯಿತು. ಅವಳು ಇನ್ನೂ ಗಟ್ಟಿಯಾಗಿ ನಕ್ಕಳು. ಕಾರಣವೇನೆಂದು ಅನಂತನು

ವಿಚಾರಿಸಲು, “ಭಾವಯ್ಯ, ‘ನಿನ್ನನ್ನು ಕತ್ತೆಯೆಂದು ಕರೆಯಲೇ?’ ಎಂದು ನಾನು ಕೇಳಲು, ನೀನು ‘ಹೂಂ’ ಎಂದೆ. ಇನ್ನು ಹಾಗೆ ಕರೆಯಲೇನು? ಮನೆಗೆ ಹೋದ ಕೂಡಲೆ ಅಮ್ಮನಿಗೂ ಅಕ್ಕನಿಗೂ ನಿನ್ನ ಈ ಹೊಸ ಜನ್ಮದ ಸುದ್ದಿಯನ್ನು ತಿಳಿಸಬೇಕು.” ಎಂದಳು.

“ಲೀಲೆ, ನಾನು ‘ಹೂಂ’ಗುಟ್ಟಿದೆನೇನು? ನನ್ನ ಮನಸ್ಸೆಲ್ಲೊ ಇದ್ದಾಗ, ನೀನು ಉಪಾಯದಿಂದ ನನ್ನನ್ನು ಅಪಹಾಸ್ಯಕ್ಕೀಡುಮಾಡಿದೆ ಯಲ್ಲ!”

“ಒಹೋ! ಈ ದಿನ ನಿನ್ನ ಪರೀಕ್ಷೆಯ ಫಲಿತಾಂಶವು ತಿಳಿಯುತ್ತ ದೆಂದು ನೀನು ಹೇಳಿದ್ದೆ. ಆದುದರಿಂದಲೆ ನಿನ್ನ ಮನಸ್ಸು ಸ್ವಸ್ಥವಾಗಿಲ್ಲದಿರ ಬಹುದು. ಇನ್ನು ಹಿಂದಿರುಗೋಣವೆ? ನೀನು ಪಾಸಾದರೆ ನನಗೆ ಮಿಠಾಯಿ ಕಳುಹಿಸಿಕೊಡಲು ಮರೆಯಬೇಡ. ತಿಳಿಯಿತೆ?”

ಅವರು ಮನೆ ಮುಟ್ಟಬೇಕಾದರೆ, ಸೀತೆಯು ಮನೆಸೇರಿದ್ದಳು. ಅವಳನ್ನು ಕಂಡೊಡನೆ ಅನಂತನ ಮುಖದಲ್ಲಿ ಒಂದು ಎಳನಗೆ ಮಿಂಚಿ, ಉತ್ತರ ಕ್ಷಣದಲ್ಲೆ ಮಾಯವಾಗಿ, ಖಿನ್ನತೆಯು ಅವನನ್ನಾವರಿಸಿತು.

ಅವನನ್ನು ನೋಡಿದಾಕ್ಷಣ ಸೀತೆಯ ಹೃದಯದಲ್ಲಿ ಅಲಗಿಕ್ಕಿ ತಿರುಪಿದಂತಾಯಿತು. ಲೀಲೆಯು ಕತ್ತೆಯ ಪ್ರಸಂಗವನ್ನೆತ್ತಿ ನಗಲು, ಚಂದ್ರ ಭಾಗಮ್ಮನೂ ನಕ್ಕಳು. ಹಿಂದೆ ಇಂತಹ ಸಂದರ್ಭದಲ್ಲಿ ಅನಂತನು ಬಿದ್ದು ಬಿದ್ದು ನಗತಕ್ಕವನು. ಆದರೆ ಇಂದು ಮಾತ್ರ ಅವನು ಖಿನ್ನನಾಗಿ ಕುಳಿತಿದ್ದ. ಸೀತೆಯಿಂದಲೂ ನಗಲಾಗಲಿಲ್ಲ.

ಇನ್ನು ಮುಂದೆ ಈತನನ್ನು ಎಂದೆಂದಿಗೂ ಪೀಡಿಸೆನೆಂದು ಸೀತೆಯು ಮನಸ್ಸಿನಲ್ಲಿ ಶಪಥಹಾಕಿಕೊಂಡಳು.

೧೧

ಮರುದಿನ ಮಧ್ಯಾಹ್ನ ಅನಂತನು ಊಟ ಮುಗಿಸಿದವನೆ ಚಂದ್ರಭಾಗಮ್ಮನ ಮನೆಗೆ ಹೋದ. ಚಂದ್ರಭಾಗಮ್ಮನು ಅಡುಗೆ ಕೋಣೆಯ ಕಿಟಕಿಯಿಂದ ಫಕ್ಕನೆ ಅವನನ್ನು ನೋಡಿ, ಹೊರಗೆ ಬಂದು, ಬಾಗಿಲು ತೆರೆದು, ಸೀತೆ ಲೀಲೆಯರು ಊಟಕ್ಕೆ ಕುಳಿತಿರುವರೆಂದೂ ಅವನು ಇಷ್ಟವಿದ್ದರೆ ಅಲ್ಲಿಗೆ ಬರಬಹುದೆಂದೂ ತಿಳಿಸಿದಳು. ಅನಂತನು ಚಾವಡಿಯಲ್ಲೆ ಕುಳಿತುಕೊಂಡ. ಅವಳು ಒಳಗೆ ಹೋಗಿ ಅವನು ಬಂದ ಸುದ್ದಿಯನ್ನು ಹುಡುಗಿಯರಿಗೆ ತಿಳಿಸಿದಳು.

ಲೀಲೆಯು "ಅಮ್ಮಾ, ಅವನ ಪರೀಕ್ಷೆಯ ಫಲಿತಾಂಶವು ನಿನ್ನೆ ಬರುವುದೆಂದು ಹೇಳಿದ್ದ. ಅವನು ಪಾಸೋ ಏನೆಂಬುದನ್ನು ನೀನು ವಿಚಾರಿಸಲಿಲ್ಲವೆ?" ಎಂದು ಕೇಳಿದಳು.

"ನನಗೇನು ಗೊತ್ತು ಮಗೂ, ಫಲಿತಾಂಶವು ನಿನ್ನೆ ಬರುವುದೆಂದು! ಅವನ ಮುಖ ಇಷ್ಟು ಸಣ್ಣದಾಗಿದೆ. ಅವನಾಗಿ ಹೇಳಿಲ್ಲ. ನಾವಾದರೂ ಅವನೊಡನೆ ಕೇಳುವುದು ಹೇಗೆ?"

"ಹಾಗಾದರೆ, ಪಾಪ! ಭಾವಯ್ಯನು ಫೈಲಾಗಿರಬಹುದು. ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದ್ದೇನೆಂದು ಹೇಳುತಿದ್ದ. ಹೇಗೆ ಫೈಲಾದನೊ ದೇವರಿಗೇ ಗೊತ್ತು!"

"ನೀನೆ ಹೋಗಿ ಕೇಳಮ್ಮ."

ಸೀತೆ ಲೀಲೆಯರು ಊಟ ಮುಗಿಸಿಕೊಂಡು ಹೊರಗೆ ಬಂದರು. ಅವರೊಟ್ಟಿಗೆ ಚಂದ್ರಭಾಗಮ್ಮನೂ ಬಂದಳು.

ಲೀಲೆಯನ್ನು ನೋಡಿದ ಕೂಡಲೆ ಅನಂತನು ವಿಷಾದ ಪೂರ್ಣವಾದ ನಗುವನ್ನು ನಕ್ಕು, ಒಂದು ತೊಟ್ಟೆಯನ್ನು ಕೈಯಲ್ಲೆತ್ತಿಕೊಂಡು," ನಿನ್ನೆ ನೀನು ಮಿಠಾಯಿ ಕೇಳಿದ್ದೆಯಲ್ಲವೆ? ಇಗೋ. ಇದು ಮನೆಯಲ್ಲಿ ಮಾಡಿದುದಲ್ಲ.

ಬರುವಾಗ ಹೊಟೇಲಿನಲ್ಲಿ ತೆಗೆದುಕೊಂಡದ್ದು. ತುಪ್ಪದ್ದೊ ಎಣ್ಣೆಯದೊ ಹೊಟೇಲಿನ ಆ ಮಹಾತ್ಮನಿಗೇ ಗೊತ್ತು'' ಎಂದು ಹೇಳಿದ.

ಲೀಲೆಯು ಸಂತೋಷದಿಂದ ಮುಂದೆ ಬಂದು ಅದನ್ನು ಸ್ವೀಕರಿಸಿ, ''ಭಾವಯ್ಯ, ನೀನು ಫೈಲಾಗಿದ್ದೀಯೆಂದು ನಿನ್ನ ಮುಖವು ಹೇಳುತಿತ್ತು. ನಿಜವಾಗಿಯೂ ನೀನು ಪಾಸಾಗಿದ್ದೀಯಷ್ಟೆ?'' ಎಂದು ಕೇಳಿದಳು.

''ನಾನು ಪಾಸಾಗಿದ್ದೇನೆ. ಮಾತ್ರವಲ್ಲ—ಸೆಕೆಂಡ್ ಕ್ಲಾಸ್''

''ಹಾಗಾದರೆ ಫಸ್ಟ್‌ಕ್ಲಾಸ್ ಸಿಗಲಿಲ್ಲವೆಂದು ಈ ಬೇಸರವೆ?''

ಉತ್ತರವೇನೀಯಬೇಕೆಂದು ಅನಂತನಿಗೆ ತೋಚದಾಯಿತು. ಕೊಂಚ ಹೊತ್ತು ಯೋಚಿಸಿ, ''ಲೀಲೆ, ನಾನು ಸೆಕೆಂಡ್ ಕ್ಲಾಸ್ ಪಾಸಾದರೇನಾಯಿತು? ನನ್ನ ಅತ್ಯಂತ ಮಿತ್ರರಲ್ಲಿ ಕೆಲವರು ಫೈಲಾಗಿದ್ದಾರೆ. ಇದರಿಂದಾಗಿ ನನಗೆ ಬಹಳ ಬೇಸರ'' ಎಂದ.

ಅನಂತನ ಮಿತ್ರವಾತ್ಸಲ್ಯಕ್ಕಾಗಿ ಚಂದ್ರಭಾಗಮ್ಮನಿಗೂ ಲೀಲೆಗೂ ತುಂಬಾ ಸಂತೋಷವಾಯಿತು. ಅನಂತನಂತಹ ಮನುಷ್ಯನಿಗೆ ಹಲವು 'ಅತ್ಯಂತ ಮಿತ್ರ'ರಿರುವುದು ಸಹಜವೆಂದೂ ಅಂತಹ ಅತ್ಯಂತ ಮಿತ್ರರಲ್ಲಿ ಕೆಲವರಾದರೂ ಫೈಲಾಗಲೇ ಬೇಕೆಂದೂ ವರ್ಷ ವರ್ಷವೂ ಪಾಸಾಗುತ್ತಿದ್ದ ಅನಂತನಿಗೆ ಇಂತಹ ಅನುಭವವು ಅನೇಕ ಸರ್ತಿ ಬಂದಿರಬೇಕೆಂದೂ ಇಂತಹ ಕ್ಷುಲ್ಲಕ ಕಾರಣದಿಂದಾಗಿ ಅವನು ವ್ಯಸನದ ಪ್ರತಿಮೂರ್ತಿಯಂತಿರುವುದಿಲ್ಲವೆಂದೂ ಅವನ ವ್ಯಸನಕ್ಕೆ ಬೇರೆಯೆ ಕಾರಣವಿದೆಯೆಂದೂ ಆ ಕಾರಣವು ಇಂತಹದೇ ಎಂದೂ ಸೀತೆಗೆ ಮಾತ್ರ ಗೊತ್ತಿದ್ದಿತು. ಆಕೆಯು ಕರುಣಾಪೂರ್ಣ ದೃಷ್ಟಿಯಿಂದ ಅವನನ್ನು ನೋಡಲು, ಅವನು ತಲೆ ತಗ್ಗಿಸಿ ನಿಟ್ಟುಸಿರಿಟ್ಟ.

ಲೀಲೆಯ ವಿನೋದವಾಕ್ಯಗಳಿಂದಾಗಿ ಅನಂತನು ಖಿನ್ನತೆಯನ್ನು ತೊರೆದು ಎಂದಿನಂತಾದ. ಅವನು ಮನೆಗೆ ಹೋಗಲೆಂದೆದ್ದಾಗ, ಚಂದ್ರ

ಭಾಗಮ್ಮನು ಅವನನ್ನು ಕುಳ್ಳಿರಹೇಳಿ, ಅಂದು ಅಲ್ಲೆ ಕಾಫಿಗೆ ನಿಲ್ಲ ಬೇಕೆಂದು ಒತ್ತಾಯಮಾಡಿದಳು. ಅನಂತನಿಗೆ ಬೇಕಾಗಿದ್ದುದೂ ಅಷ್ಟೆ! ಅಂದು ಸಂಜೆ ತನ್ನ ಭವಿಷ್ಯವನ್ನು ಇತ್ಯರ್ಥಗೊಳಿಸಬೇಕೆಂದು ಅವನು ದೃಢಸಂಕಲ್ಪಮಾಡಿಕೊಂಡಿದ್ದ. ತಾನು ಮನೆಗೆ ಹೋದರೆ, ಸಾಯಂಕಾಲ ಹಿಂದಿರುಗುವುದರೊಳಗಾಗಿ ಎಲ್ಲಿ ಸೀತೆಯು ಗೋವಿಂದರಾಯರೊಟ್ಟಿಗೆ ತಿರುಗಾಡಹೋಗಿ ತನ್ನ ಕೈಯಿಂದ ತಪ್ಪಿಸಿಕೊಳ್ಳುವಳೊ ಎಂಬ ಹೆದರಿಕೆಯು ಅವನಿಗಿತ್ತು. ಆದುದರಿಂದ ಕಾಫಿಯ ಆಮಂತ್ರಣವನ್ನು ಅವನು ಸಂತೋಷದಿಂದ ಸ್ವೀಕರಿಸಿದ.

ಕಾಫಿ ಕುಡಿದಾದನಂತರ ಲೀಲೆಯು "ಭಾವಯ್ಯಾ, ತಿರುಗಾಡಲು ಹೋಗೋಣವೇ? ಅಕ್ಕಾ, ಬಾ. ಇವತ್ತು ಹೆಚ್ಚು ನಡೆದು ಬರೋಣ. ಮೊದಲು ಸೋಲುವುದು ನೀನೊ ನಾನೊ ಎಂಬುದನ್ನು ಭಾವಯ್ಯನೆ ನಿಶ್ಚಯಿಸಲಿ. ಬೇಗನೆ ಹೊರಡು" ಎಂದಳು.

"ನೀನು ಹೋಗೇ, ನಾನು ಬರುವುದಿಲ್ಲ. ನಿನ್ನಷ್ಟು ನಡೆಯಲು ನನ್ನಿಂದಾಗುವುದಿಲ್ಲವೆಂದು ಒಪ್ಪುತ್ತೇನೆ. ಇನ್ನಾದರೂ ನಿನಗೆ ಮನಸ್ಸಮಾಧಾನವಾಯಿತೆ?"

"ಹಾಗಾದರೆ ನೀನು ಮೊನ್ನೆ ಪೆಟ್ಟು ಕೊಟ್ಟೆಯಷ್ಟೆ! ಅದನ್ನು ಹಿಂದೆ ತೆಗೆದುಕೊಳ್ಳಬಲ್ಲೆಯಾ?"

ಎಲ್ಲರೂ ನಕ್ಕರು. ಅನಂತನು ಸೀತೆಯನ್ನುದ್ದೇಶಿಸಿ, "ನೀನೂ ಬರಬಾರದೆ?" ಎಂದು ದೀನಸ್ವರದಿಂದ ಕೇಳಿದ.

ಮೂವರೂ ಹೊರಹೊರಟರು. ಕೊಂಚ ದೂರ ಹೋದ ಮೇಲೆ ಅನಂತನು ಏನೊ ನೆನಪಾದಂತೆ ನಟಿಸಿ, "ಲೀಲೆ, ನಿನ್ನೊಡನೆ ಹೇಳಲು ಮರೆತೆ ಹೋಯಿತು. ನಿನ್ನ ಮೇಲೆ ಅಮ್ಮನು ದೊಡ್ಡ 'ಫಿರ್ಯಾದು' ಮಾಡಿರುವಳು. ನೀನು ಇತ್ತೀಚೆ ನಮ್ಮಲ್ಲಿಗೆ ಬರಲೇ ಇಲ್ಲವಂತೆ! ನಿನ್ನನ್ನು ಕೂಡಲೆ ರವಾನಿಸಬೇಕೆಂದು ಅಮ್ಮನು ಹೇಳಿದ್ದಳು. ಇಂತಹ ನೆನಪಿ

ನಿಂದ ನಾನು ಪರೀಕ್ಷೆಯಲ್ಲಿ ಹೇಗೆ ಪಾಸಾಗುತ್ತೇನೊ ನಾಳೆ ಹೇಗೆ ವಕಾಲತ್ತು ನಡೆಸುವೆನೊ ಆ ಪರಮಾತ್ಮನೆ ಬಲ್ಲ!" ಎಂದ.

ಲೀಲೆಯನ್ನು ಹೇಗಾದರೂ ಕಳುಹಿಸಿ, ತನ್ನ ಹೃದಯವನ್ನು ಬಿಚ್ಚಿ, ಸೀತೆಗೆ ಎಲ್ಲವನ್ನೂ ತಿಳಿಸಬೇಕೆಂಬ ಉದ್ದೇಶದಿಂದ ಅನಂತನು ಈ ಯುಕ್ತಿ ಹೂಡಿದ್ದ. ಲೀಲೆಯು ಹೋದ ಮೇಲೆ ಅವನು ತನ್ನೊಡನೆ ಏನೇನು ಆಡುವನೊ ಎಂಬ ಚಿಂತೆಯು ಸೀತೆಯನ್ನಾವರಿಸಿತು.

ಲೀಲೆಯು "ಭಾವಯ್ಯಾ, ಸುಳ್ಳು ಹೇಳಿದರೆ, ಅದು ಪಸಿಮಣ್ಣಿನ ಗೋಡೆಗೆ ಕಲ್ಲೆಸೆದಂತಾಗಬೇಕು! ಹೀಗೆ ಹಸಿಹಸಿ ಸುಳ್ಳನ್ನು ಹೇಳಲು ಎಲ್ಲಿ ಕಲಿತೆ? ನೀನಿನ್ನೂ ವಕೀಲನಾಗಿಲ್ಲ; ಈಗಾಗಲೆ ಸುಳ್ಳು ಹೇಳಲು ಪ್ರಾರಂಭಿಸಿದೆಯಾ? ನಾನು ನಿನ್ನೆ ಅಲ್ಲ, ಮೊನ್ನೆ ತಾನೆ ನಿಮ್ಮ ಮನೆಗೆ ಹೋಗಿದ್ದೆ. ಕಾವೇರತ್ತೆಯೊಂದಿಗೆ ಗಂಟೆಗಟ್ಟಲೆ ಮಾತಾಡಿ ಬಂದಿರುವೆ. ನಾನು ಅಲ್ಲಿಗೆ ಬಾರದೆ ಹೆಚ್ಚು ದಿನವಾಯಿತೆಂದು ಅವರು ಹೇಳಿದರೆ?" ಎಂದು ಕೇಳಿದಳು.

"ಹಾಗಾದರೆ ಹೋಗಬೇಡ. ನೀನು ಮೊನ್ನೆ ಊಟಮಾಡಿಲ್ಲವೆ? ಇವತ್ತು ನಾನು ಬಂದಾಗ ನೀನು ಊಟಕ್ಕೆ ಕುಳಿತಿದ್ದಿಯಂತೆ! ಅದು ಬಹುಶಃ ಸುಳ್ಳು; ಏಕೆಂದರೆ, ಮೊನ್ನೆ ಮಾಡಿದುದನ್ನು ಇವತ್ತು ನೀನು ಎಷ್ಟು ಮಾತ್ರಕ್ಕೂ ಮಾಡತಕ್ಕವಳಲ್ಲ."

"ಹಾಗಲ್ಲ. ಮೊನ್ನೆ ಕಾವೇರತ್ತೆಗೂ ನನಗೂ ಜಗಳವಾಗಿ ಇನ್ನು ನಾನೆಂದಿಗೂ ಅವರ ಮನೆಗೆ ಬರುವುದಿಲ್ಲವೆಂದು ಖಡಾಖಂಡಿತ ಹೇಳಿ ಬಂದಿದ್ದೇನೆ."

"ಎಂತಹ ಜಗಳ? ಕೇಳೋಣ."

"ನನ್ನನ್ನು 'ಸೊಸೆ'ಯೆಂದು ಕರೆಯಕೂಡದೆಂದೂ ಹಾಗೆ ಕರೆದರೆ ನಾನು ಎಂದೆಂದಿಗೂ ಅವರ ಮನೆಗೆ ಬರುವುದಿಲ್ಲವೆಂದೂ ಅಂದು ನಾನು

ಹೇಳಿದ್ದೆನಷ್ಟೆ! ಇಷ್ಟು ದಿನ ಅವರು ಬಹಳ ಜಾಗರೂಕತೆಯಿಂದಿದ್ದರು. ಆದರೆ ಮೊನ್ನೆ ಕರೆದೇ ಬಿಟ್ಟರು.”

“ಕರೆದರೇನಾಯಿತು?”

“ಏನಾಯಿತೆ! ನಾನಿನ್ನು ಅವರ ಹೊಸ್ತಿಲು ದಾಟುವುದಿಲ್ಲವೆಂದು ಹೇಳಿ ಬಂದಿದ್ದೇನೆ.”

“ಅದಕ್ಕೆ ಅಮ್ಮನೇನೆಂದಳು?”

“ ‘ಮದುವೆಯಾದ ಮೇಲಾದರೂ ನೀನು ನನ್ನ ಹೊಸ್ತಿಲು ದಾಟುವೆಯೊ ಇಲ್ಲವೊ ನೋಡುತ್ತೇನೆ’ ಎಂದರು.” ಲಜ್ಜೆಯಿಂದ ಲೀಲೆಯ ಮುಖವು ಕೆಂಪೇರಿತು.

“ಅದಕ್ಕೆ ನೀನೇನು ಪ್ರತ್ಯುತ್ತರವಿತ್ತೆ?”

“ನಾನು ಪ್ರತ್ಯುತ್ತರ ಕೊಡಲೇ ಇಲ್ಲ. ಓಡಿ ಬಂದುಬಿಟ್ಟೆ.”

“ನೀನು ಮಾಡಿದುದು ಸರಿಯಾಗಲಿಲ್ಲ. ಅವರ ಬಾಯಿ ಮುಚ್ಚಿಸುವಂತಹ ಮಾತುಗಳನ್ನಾಡಬೇಕಿತ್ತು.”

“ಏನೆಂದು?”

“ನೀನು ಹೇಳಬೇಕಿತ್ತು– ‘ಕಾವೇರತ್ತೆ, ಮದುವೆಯಾದ ಮೇಲೆ ನಾನು ನಿಮ್ಮ ಹೊಸ್ತಿಲು ದಾಟುವೆನೊ ಇಲ್ಲವೊ ಎಂದು ನೋಡಬೇಕೆಂದಿರುವಿರಾ? ನಿಮ್ಮ ಹುಚ್ಚಿಗೆ ನಾನೇನೆನ್ನಲಿ! ನನ್ನ ಮದುವೆಯಾದ ಮೇಲೆ, ಪಾಪ! ನಿಮಗೆ ಮನೆಯಿದ್ದರಲ್ಲವೆ, ಹೊಸ್ತಿಲಿರುವುದು? ಎಲ್ಲವೂ ನನ್ನದು ಮತ್ತು ನನ್ನ........ನನ್ನ........ಗಂಡನದು! ನನ್ನ ಮನೆಗೆ ನಾನು ಬೇಕಾದಾಗ ಬಂದು ಹೋಗುತ್ತಿರುವಾಗ ನನ್ನನ್ನು ಆಕ್ಷೇಪಿಸಲು ನೀವಾರು?’ ಎಂದು ನೀನು ಹೇಳಿಬಿಟ್ಟಿದ್ದರೆ, ಕಾವೇರತ್ತೆಯ ಬಾಯಿಯನ್ನು ‘ಸಿಂಗರ್’ ಯಂತ್ರದಿಂದ ಹೊಲಿದ ಹಾಗಾಗುತಿತ್ತು”

ಅನಂತನೂ ಸೀತೆಯೂ ತುಂಬಾ ನಕ್ಕರು. ಲೀಲೆಗೆ ನಗುಬಂದರೂ, ಪ್ರಯತ್ನಪೂರ್ವಕವಾಗಿ ತಡೆದುಕೊಂಡಳು. ಲಜ್ಜಾಭರದಿಂದ ಅವಳ ಮುಖವು ಪುನಃ ಕೆಂಪೇರತೊಡಗಿತು. "ನಾನು ಯಾರಿಗೂ ಬೇಡವಾದ ವಳು. ನನ್ನನ್ನು ಓಡಿಸಲು ಎಲ್ಲರೂ ಯತ್ನಿಸುತ್ತಾರೆ. ಮೊನ್ನೆ ಅಕ್ಕನು ನನ್ನನ್ನು ಓಡಿಸಿದಳು. ಇಂದು ನೀನು ನನ್ನನ್ನು ಓಡಿಸಲು ಯತ್ನಿಸುತ್ತಿರುವೆ. ಈ ಲೋಕದಲ್ಲಿ ಕಾವೇರತ್ತೆಗೊಬ್ಬರಿಗೆ ಮಾತ್ರ ನಾನು ಬೇಕಾಗಿದ್ದೇನೆ. ಅವರು ನನಗೆ ಬೇಕಾಗಿದ್ದಾರೆ. ನಾನು ಅಲ್ಲಿಗೇ ಹೋಗುತ್ತೇನೆ. ನೀವು ನನ್ನ ಹಾವಳಿಯಿಂದ ಪಾರಾಗಿ ನಿಶ್ಚಿಂತರಾಗಿರಿ" ಎಂದು ಹೇಳಿ ಲೀಲೆಯು ಗೋಪಾಲರಾಯರ ಮನೆಯ ಕಡೆ ಹೋದಳು.

ಅನಂತನು ಅವಳನ್ನು ಹಿಂದಕ್ಕೆ ಕರೆದು, "ಲೀಲೆ, ನೀನು ಯಾರಿಗೂ ಬೇಡವಾದವಳೆಂದು ಮಾತ್ರ ಹೇಳಬೇಡ. ನೀನು ಬೇರೆ ಯಾರಿಗೆ ಬೇಡವಾಗಿದ್ದರೂ, ನನಗೆ ಮಾತ್ರ ನೀನು ಬೇಕೇಬೇಕು" ಎಂದು ಹೇಳಿದ.

ಈ ಮಾತುಗಳು ಲೀಲೆಗೆ ಸರಿಯಾಗಿ ಕೇಳಿಸಿದರೂ, ಕೇಳದವಳಂತೆ ನಟಿಸಿ ಮುಂದೆ ಸಾಗಿದಳು.

ಅನಂತನು ಸೀತೆಯೊಂದಿಗೆ ಮೌನವಾಗಿ ನಡೆದು ಅಬಕಾರಿ ಮೈದಾನಿಗೆ ಹೋಗಿ, ಅಲ್ಲಿ ಒಂದು ಮೂಲೆಯಲ್ಲಿ ಅವಳನ್ನು ಕುಳ್ಳಿರಹೇಳಿ, ತಾನೂ ಕುಳಿತುಕೊಂಡ.

---

## ೧೨

"ಸೀತೆ, ನಾನು ಒಬ್ಬಳಲ್ಲಿ ಅನುರಕ್ತನಾದೆನೆಂದು ಭಾವಿಸೋಣ. ಆಕೆಯು ಬೇರೊಬ್ಬನನ್ನು ಪ್ರೀತಿಸುವುದಾದರೆ, ನಾನು ಮಾಡಬೇಕಾದು ದೇನು?"

ಏನು ಹೇಳಲೆಂದು ಸೀತೆಗೆ ತೋಚಲಿಲ್ಲ. ಆದರೆ ಅನಂತನು ತನ್ನನ್ನು ಸುಮ್ಮನೆ ಬಿಡುವವನಲ್ಲವೆಂದು ಅವಳಿಗೆ ಕಂಡುಬಂದಿತ್ತು. ಆದುದರಿಂದ ಈ ಕಠಿನ ಪ್ರಸಂಗದಿಂದ ಪಾರುವಾಡಬೇಕೆಂದು ಭಗವಂತ ನೊಡನೆ ಪ್ರಾರ್ಥಿಸಿ, ಅನಂತನ ಪ್ರಶ್ನೆಗಳಿಗೆಲ್ಲಾ ಯೋಗ್ಯ ಉತ್ತರಗಳನ್ನು ಕೊಡಬೇಕೆಂದು ನಿಶ್ಚಯಿಸಿದಳು.

"ಭಾವಯ್ಯಾ, ನಿನ್ನ ಪ್ರೇಮದ ಸಂಗತಿಯೊಂದೂ ನನಗೆ ತಿಳಿಯದು. ಆದುದರಿಂದ ನಿನ್ನ ಪ್ರಶ್ನೆಗೆ ತಕ್ಕ ಉತ್ತರವನ್ನು ಹೇಗೆ ಕೊಡಲಿ? ನಿನ್ನ ಆ ಪ್ರೇಯಸಿಗೆ ನಿನ್ನ ಪ್ರೇಮದ ಸಂಗತಿಯು ತಿಳಿದಿರುವುದೆ? ತಿಳಿದಿದ್ದರೂ, ನಿನ್ನನ್ನು ಉಪೇಕ್ಷಿಸಿ, ಬೇರೊಬ್ಬನನ್ನು ಪ್ರೀತಿಸುವಳೆ?"

"ಅವಳಿಗೆ ತಿಳಿದಿರಲೂ ಬಹುದು; ತಿಳಿಯದಿರಲಿಕ್ಕೂ ಸಾಕು ಎಂದು ಭಾವಿಸೋಣ."

"ಅವಳಿಗೆ ತಿಳಿದಿಲ್ಲವಾದರೆ, ಅವಳಿಗೆ ತಿಳಿಸಿ ನಿನ್ನ ಮನಸ್ಸನ್ನು ಹಗುರವಮಾಡಿಕೊಳ್ಳಬಹುದು. ತಿಳಿದ ಮೇಲೆ ಅವಳೇನೆನ್ನುವಳೆಂದು ನೋಡಬೇಕು."

"ಅವಳು ನನ್ನನ್ನು ಉಪೇಕ್ಷಿಸಿದಳೆಂದು ಭಾವಿಸೋಣ."

"ಅವಳು ಆ ಇನ್ನೊಬ್ಬನ ಮೇಲಿನ ಪ್ರೇಮದಿಂದಾಗಿ ನಿನ್ನನ್ನು ಒಲ್ಲೆನೆಂದರೆ, ನೀನು ಅವಳನ್ನು ಅವಳಷ್ಟಕ್ಕೆ ಬಿಟ್ಟು, ಬೇರೊಬ್ಬಳನ್ನು ವರಿಸುವುದುತ್ತಮ. ಆದರೆ ಅವಳು ಸ್ತ್ರೀಸಹಜವಾದ ಲಜ್ಜೆಯಿಂದ ಒಲ್ಲೆನೆಂದರೆ, ನೀನು ನಿರಾಶನಾಗದೆ, ಇನ್ನೂ ಹೆಚ್ಚಿನ ಪ್ರಯತ್ನವಮಾಡ ತಕ್ಕದ್ದು. ಭಾವಯ್ಯಾ, ಈ ಸಂದರ್ಭದಲ್ಲಿ ನಿನ್ನೊಡನೆ ಒಂದು ಮಾತ ನ್ನಾಡಬೇಕೆಂದಿದ್ದೇನೆ. ನಮ್ಮ ಲೀಲೆಯು ವಿವಾಹಯೋಗ್ಯವಾದ ವಯ ಸ್ಸನ್ನು ಹೊಂದಿರುವಳು. ಅವಳು ಎಲ್ಲ ವಿಧದಿಂದಲೂ ನಿನಗೆ ಅನು ರೂಪಳಾದವಳು. ಕಲಿಯುವುದರಲ್ಲಿಯೂ ಗಟ್ಟಿಗಳು. ನೀನು ವಕೀಲ ನಾಗಿ ಬರುವಾಗ ಅವಳ ಎಸ್. ಎಸ್. ಎಲ್. ಸಿ. ಮುಗಿಯುತ್ತದೆ.

ನೀನು ಅವಳನ್ನು ಬೇಕಾದಷ್ಟು ಓದಿಸಬಹುದು. ವಿದ್ಯಾವತಿಯಾಗ ಬೇಕೆಂಬ ಹಂಬಲೂ ಅವಳಿಗಿದೆ. ನಿನಗೆ ಅನುಕೂಲ ಪತ್ನಿಯಾಗಿ, ನಿನ್ನ ಮನೆ ಬೆಳಗಿ, ನಿನಗೆ ಸುಖದ ಪರಮಾವಧಿಯನ್ನು ಕೊಡಲು ಅವಳು ಶಕ್ತ ಳೆಂದು ನಾನು ಖಂಡಿತವಾಗಿ ಹೇಳಬಲ್ಲೆ. ಆದರೆ ಹೆಚ್ಚು ವರದಕ್ಷಿಣೆ ಕೇಳಿದರೆ ಮಾತ್ರ ನಮ್ಮಿಂದ ತೆರಲು ಸಾಧ್ಯವಿಲ್ಲ. ನಮ್ಮಲ್ಲಿರುವ ಎಲ್ಲ ಹಣವನ್ನೂ, ನಮ್ಮ ಮನೆ ಸಮೇತ ಲೀಲೆಯ ಅಥವಾ ನಿನ್ನ ಹೆಸರಿಗೆ ಮಾಡಿಬಿಡುತ್ತೇವೆ. ನನಗೆ ಹೇಗೂ ಉದ್ಯೋಗವಿರುವುದರಿಂದ, ಅಮ್ಮನ ಮತ್ತು ನನ್ನ ಜೀವನವು ಸುಸೂತ್ರವಾಗಿ ನಡೆಯುವುದು. ಭಾವಯ್ಯಾ, ನಮ್ಮ ಲೀಲೆಯನ್ನು ಸಿಕ್ಕವರ ಉಡಿಯಲ್ಲಿ ಹಾಕಲು ನಮಗೆ ಮನಸ್ಸು ಬಾರದು. ನೀನು ವಿವಾಹಕ್ಕೆ ಸಮ್ಮತಿಯಿತ್ತು ನಮ್ಮನ್ನುದ್ಧರಿಸಲಾರೆಯಾ? ಬೆಡಗಿನ ವೈಯ್ಯಾರಿಯ ಕೃತಕ ಬಾಹ್ಯಸೌಂದರ್ಯಕ್ಕೆ ನೀನು ಮೋಹಿತ ನಾಗಿದ್ದರೆ, ಕೂಡಲೆ ಅದನ್ನೆಲ್ಲಾ ಮರೆತು, ನಿನ್ನ ಆಕ್ಷೇಪವಿಲ್ಲದಿದ್ದರೆ, ನಮ್ಮ ಲೀಲೆಯ ಪಾಣಿಗ್ರಹಣ ಮಾಡಬಾರದೆ? ಈ ಸಂಗತಿಯನ್ನು ನಿನ್ನೊಡನೆ ವಿಚಾರಿಸಬೇಕೆಂದು ಅಮ್ಮನು ಎಷ್ಟೋ ದಿನಗಳಿಂದಲೂ ಹೇಳು ತ್ತಿರುವಳು. ಆದರೆ, ಚೆನ್ನಾಗಿ ಯೋಚಿಸದೆ ಈ ಪ್ರಸ್ತಾಪವನ್ನೆತ್ತಲು ನನಗೆ ಧೈರ್ಯ ಬರಲಿಲ್ಲ. ಈಗ ಲೀಲೆಯನ್ನು ಕಳುಹಿಸುವಾಗ ನೀನಾ ಡಿದ ಮಾತುಗಳಿಂದಾಗಿ, ನೀನು ಆಕೆಯನ್ನು ಪ್ರೀತಿಸುವೆಯೆಂದು ನಾನು ಅಭಿಪ್ರಾಯಪಟ್ಟಿರುವೆನು. ಭಾವಯ್ಯಾ, ನಿನ್ನ ತಾಯಿಗೂ ನಮ್ಮ ಲೀಲೆ ಯೆಂದರೆ ಬಹಳ ಪ್ರೀತಿ. ಲೀಲೆಯು ಸೊಸೆಯಾದರೆ ಅವರಿಗಾಗುವ ಆನಂದವು ಅಷ್ಟಿಷ್ಟಲ್ಲ. ನಮ್ಮೆಲ್ಲರನ್ನೂ ನಿರಾಶೆಗೊಳಿಸಬೇಡ."

"ಸೀತೆ, ನಾನು ಲೀಲೆಯನ್ನು ಮೋಹಿಸುವೆನೆಂದು ಭಾವಿಸಿದೆಯೆ? ಅವಳ ಸಹವಾಸವೂ ಇನಿಮಾತುಗಳೂ ಸಂತೋಷದಾಯಕವಾಗಿವೆ ಯೆಂಬುದೇನೊ ನಿಜ! ಆದರೂ, ಅವಳನ್ನು ವಿವಾಹವಾಗಬೇಕೆಂಬ ಇಚ್ಛೆಯು ನನಗಿದುವರೆಗೂ ಬಂದಿಲ್ಲ. ನಾನು ಅವಳೊಡನೆ ವಿನೋದ ಕ್ಕಾಗಿ ಆಡಿದ ಮಾತುಗಳಿಗೆ ನೀನು ಬೇರೆಯೇ ಅರ್ಥವನ್ನು

ಕಲ್ಪಿಸುವಂತಾಯಿತು. ಸೀತೆ, ಈಗ ಆ ಮಾತನ್ನು ಬಿಟ್ಟು, ನನ್ನ ಪ್ರಶ್ನೆಗಳಿಗೆ ಉತ್ತರಕೊಡುವ ಕೃಪೆ ಮಾಡಲಾರೆಯಾ?"

"ನಿನ್ನ ಪ್ರೇಯಸಿಯನ್ನೊಲಿಸಲು ಯತ್ನಿಸು. ನಿನಗೊಲಿಯುದ ಕನ್ಯೆಯರು ಈ ಲೋಕದಲ್ಲಿರುವರೆಂದು ಭಾವಿಸಿದೆಯಾ?"

"ಕನ್ಯೆಯಲ್ಲ................ವಿಧವೆಯೆಂದು ಭಾವಿಸೋಣ."

ಸೀತೆಯ ಎದೆ ಧಸಕ್ಕೆಂದಿತು. ಅವಳು ಕಿವಿ ಮುಚ್ಚಿಕೊಂಡು "ಶಾಂತಂ ಪಾಪಂ, ಶಾಂತಂ ಪಾಪಂ, ಭಾವಯ್ಯಾ, ಮೃಷ್ಟಾನ್ನ ಭೋಜನವನ್ನು ತಿರಸ್ಕರಿಸಿ ಹಳಸಿದ ಎಂಜಲಿಗೆ ಕೈಯೊಡ್ಡುವೆಯಾ? ನೀನೆಂದರೇನು? ನಿನ್ನ ವಂಶಗೌರವವೆಂದರೇನು! ನಿನ್ನ ವಿದ್ಯೆಯೇನು! ನಿನ್ನ ಸಂಪತ್ತೇನು! ನೀನಿಚ್ಛೆಪಟ್ಟ ಮಾತ್ರಕ್ಕೆ ಎಂತಹ ಕನ್ಯೆಯಾದರೂ ಸಂತೋಷದಿಂದ ನಿನ್ನ ವಶಳಾಗಲು ಸಿದ್ಧಳಿರುವಾಗ, ಇಂತಹ ಹುಚ್ಚು ಕಲ್ಪನೆಗಳಿಗೇಕೆ ಅವಕಾಶ ಕೊಡುವೆ? ನನ್ನೊಡನೆ ಈ ಮಾತನ್ನಾಡಿಯೆಂದು ಬೇರೆಲ್ಲಾದರೂ ಇಂತಹ ಮಾತನ್ನುಚ್ಚರಿಸಿದೆಯೆಂದರೆ, ನಿನಗೆ ಹುಚ್ಚು ಹಿಡಿದಿದೆಯೆಂದಾರು! ಭಾವಯ್ಯಾ, ನೀನು ಇರುವುದು ಲಂಡನಿನಲ್ಲಲ್ಲ! ಹಿಂದೂದೇಶದಲ್ಲಿ, ಅದರಲ್ಲೂ ಸನಾತನಿಗಳ ಕೇಂದ್ರದಂತಿರುವ ಉಡುಪಿಯಲ್ಲೆಂಬುದನ್ನು ಮರೆಯಬೇಡ. ಇಲ್ಲಿರುವಾಗ ಇಲ್ಲಿನ ಸಮಾಜಕ್ಕೆ ವಿಧೇಯರಾಗಿ ನಡೆಯಬೇಕು. ಸಮಾಜಕ್ಕೆ ವಿರೋಧವಾಗಿ ವರ್ತಿಸಿದವರ ಪಾಡು ಏನಾಗುವುದೆಂಬುದನ್ನರಿಯೆಯಾ? ಇಂತಹ ಹುಚ್ಚು ಹವ್ಯಾಸಗಳಿಂದಾಗಿ ಎಷ್ಟೋ ಮಂದಿ ಸುಕುಮಾರರೂ ಕೋಮಲಾಂಗಿಯರೂ ಸಮಾಜದ ಅಗ್ನಿಕುಂಡದಲ್ಲಿ ಪ್ರಾಣತ್ಯಾಗ ಮಾಡಿರುವರು. ಇಂತಹ ಪ್ರತಾಪಿ ಸಮಾಜವನ್ನು ಕೆಣಕಲು ನೀನೆಷ್ಟರವನು? ಚೆನ್ನಾಗಿ ಆಲೋಚಿಸು. ನಿನ್ನ ಭವಿಷ್ಯವು ಎಷ್ಟು ಭವ್ಯವಾಗಿದೆಯೆಂಬುದನ್ನು ಯೋಚಿಸು. ಅಂತಹದನ್ನು ಅವಿಚಾರದ ಅಕೃತ್ಯದಿಂದಾಗಿ ಅರೂಪಗೊಳಿಸಬೇಡ. ನಿನಗೆ ಹೆಚ್ಚು ಹೇಳಲು ನಾನು ಸಮರ್ಥಳಲ್ಲ. ನನ್ನಲ್ಲಿ ಅಂತಃಕರಣವಿಟ್ಟು ಕೇಳಿದುದರಿಂದಾಗಿ ನಾನು ಇಷ್ಟೆಲ್ಲಾ ಹೇಳಬೇಕಾಯಿತು. ನಮ್ಮ ಲೀಲೆಯನ್ನು ನೀನೊಲ್ಲ

ದಿದ್ದರೂ ಚಿಂತೆಯಿಲ್ಲ. ವಿಧವೆಯನ್ನು ಮಾತ್ರ ವರಿಸಬೇಡವೆಂದು ಆಗ್ರಹಪೂರ್ವಕವಾಗಿ ಬೇಡಿಕೊಳ್ಳುತ್ತೇನೆ.''

"ಸೀತೆ, ನೀನು ಹೇಳಿದುದೆಲ್ಲವನ್ನೂ ನಾನು ಶಾಂತಚಿತ್ತನಾಗಿ ಕೇಳಿದೆ. ನಿನ್ನ ಅಭಿಪ್ರಾಯಕ್ಕನುಗುಣವಾಗಿ ವರ್ತಿಸಲು ಅಸಮರ್ಥ ನಾದುದಕ್ಕಾಗಿ ಬಹಳ ವಿಷಾದಿಸುತ್ತೇನೆ. ಇನ್ನು ನಾನು ಹೇಳುವುದನ್ನು ಮನಸ್ಸಿಟ್ಟು ಕೇಳು. ಸೀತೆ, ಮದರಾಸಿನಿಂದ ಇಲ್ಲಿಗೆ ಬಂದ ದಿನ ನಮ್ಮ ಮನೆಯಲ್ಲಿ ನಿನ್ನನ್ನು ನೋಡಿದಾಗಲೆ ನಿನ್ನಲ್ಲಿ ಅನುರಕ್ತನಾದೆ. ಈ ಅನು ರಾಗವು ದಿನೇ ದಿನೇ ಹೆಚ್ಚುತ್ತಲಿದೆಯೆ ವಿನಾ ಕಡಿಮೆಯಾಗಲೊಲ್ಲದು. ನನ್ನ ಹೃದಯುವನ್ನು ಬಿಚ್ಚಿ ತೋರಿಸಬಲ್ಲೆನಾದರೆ, ಅಲ್ಲಿ ನಿನ್ನ ಮೂರ್ತಿ ಯೊಂದೆ ವಿರಾಜಿಸುತ್ತಿರುವುದನ್ನು ಕಾಣಬಹುವಾಗಿತ್ತು. ಲೀಲೆಯನ್ನು ನಾನು ಮದುವೆಯಾಗಬೇಕೆಂದು ಅಮ್ಮನು ನನ್ನೊಡನೆ ಎಷ್ಟೊ ಸಲ ಹೇಳಿ ದಾಗ, ನನಗೆ ಸದ್ಯಕ್ಕೆ ಮದುವೆ ಬೇಡವೆಂದೂ ಮದುವೆಯ ಮಾತನು ಎತ್ತಬಾರದೆಂದೂ ನಾನು ಸ್ಪಷ್ಟವಾಗಿ ಹೇಳಿದ್ದೇನೆ. ನೀನು ಹೇಳುವಂತೆ ಲೀಲೆಯು ಎಲ್ಲವಿಧದಿಂದಲೂ ನನಗೊಪ್ಪುವ ಕನ್ಯೆಯೆಂಬುದು ನಿಜ; ಮಾತ್ರವಲ್ಲದೆ ಅವಳಂತಹ ಕುಮಾರಿಯು ನನಗೆ ದೊರೆಯಬೇಕಾದರೆ ನಾನು ಪೂರ್ವಪುಣ್ಯ ಮಾಡಿರಬೇಕೆಂಬುದಾಗಿಯೂ ಭಾವಿಸುತ್ತೇನೆ. ಆದರೆ........ಆದರೆ........ನಿನ್ನಲ್ಲಿ ಅನುರಕ್ತನಾದ ನಾನು ಲೀಲೆಯನ್ನೊ ಲ್ಲೆನು. ದೀನ ದಾಸನಾದ ನನ್ನನ್ನು ಕೃಪಾದೃಷ್ಟಿಯಿಂದ ನೋಡಲಾರೆಯಾ? ನೀನು ನನ್ನನ್ನುಪೇಕ್ಷಿಸಿದರೆ ನನಗೆ ಬುದ್ಧಿಭ್ರಂಶವಾಗುವುದು ನಿಶ್ಚಯ.

"ಸೀತೆ, ಎಷ್ಟೊ ದಿನಗಳಿಂದಲೂ ನಿನ್ನನ್ನು ಕೇಳಬೇಕೆಂದಿದ್ದೆ; ಆದರೆ ಧೈರ್ಯವಾಗಲಿಲ್ಲ. ನನ್ನನ್ನು ನಿರಾಶೆಗೊಳಿಸುವೆಯಾ? ಸಮಾಜದ ನ್ಯಾಯವೆಂದರೆ 'ಬಗ್ಗಿದವನಿಗೆ ಒಂದು ಗುದ್ದು ಹೆಚ್ಚು' ಎಂಬಂತೆ! ಯಾರು ಸಮಾಜಕ್ಕೆ ಹೆದರಿ, ಸಮಾಜದ ಆಜ್ಞಾಧಾರಕರಾಗಿರುವರೊ, ಅವರ ಮೇಲೆ ಸಮಾಜವು ದಬ್ಬಾಳಿಕೆ ನಡೆಸುತ್ತದೆ. ಆದರೆ ಯಾರು ಸಮಾಜದ ಅತ್ಯಾಚಾರಗಳನ್ನು ವಿರೋಧಿಸುವರೊ, ಅಂತಹರಿಗೆ ಸಮಾಜವು ತಲೆ

ತಗ್ಗಿಸುತ್ತದೆ. ಸಮಾಜ ಸುಧಾರಕರು ಮೊದಮೊದಲು ಸ್ವಲ್ಪ ಕಷ್ಟನಷ್ಟ ಗಳನ್ನನುಭವಿಸಬೇಕಾಗಿ ಬರುವುದು ಸಹಜ. ಆದರೆ ಅವರು ಸಮಾಜ ಹಿತವನ್ನೆ ಮುಂದಿಟ್ಟುಕೊಂಡು, ಕಾರ್ಯಸಾಧನೆಗೋಸುಗ ಎಂತಹ ಕಷ್ಟ ವನ್ನೂ ತೃಣವಾಗೆಣಿಸಿದರೆ, ಅವರು ಕೃತಕೃತ್ಯರಾಗುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ನಮ್ಮಲ್ಲಿ ಸ್ವಹಿತವನ್ನು ಲಕ್ಷಿಸದೆ ನ್ಯಾಯಕ್ಕೋಸುಗ ಹೆಣಗಾಡುವವರು ತೀರ ವಿರಳ. ವಿಧವಾವಿವಾಹವನ್ನು ಸಮರ್ಥಿಸಿ ನಾನು ಶಾಲಾ ಕೊಲೇಜುಗಳಲ್ಲಿ ಭಾಷಣಮಾಡಿದ್ದೇನೆ. ಈಗ ನನ್ನ ಅಭಿ ಪ್ರಾಯವನ್ನು ಕಾರ್ಯರೂಪದಲ್ಲಿ ತರಲು ಹವಣಿಸುತಿದ್ದೇನೆ. ಸೀತೆ, ಈ ಪವಿತ್ರ ಕಾರ್ಯದಲ್ಲಿ ಸಹಕರಿಸಲಾರೆಯಾ?

"ಇನ್ನೊಂದು ಮಾತು. ನೀನು ಗೋವಿಂದರಾಯರನ್ನು ಪ್ರೀತಿಸುವೆ ಯೆಂಬುದಾಗಿ ನಾನು ಭಾವಿಸುತ್ತೇನೆ. ನಿನ್ನೆಯೂ ಮೊನ್ನೆಯೂ ನೀನು ಅವರೊಂದಿಗೆ ತಿರುಗಾಡಲು ಹೋಗಿದ್ದಿಯಂತೆ! ಇನ್ನು ಮುಂದೆ ನಿತ್ಯವೂ ಅವರೊಡನೆ ಹೋಗಬೇಕೆಂದು ನೀನಿಚ್ಛಿಸುತ್ತಿರಬಹುದು. ಅವರನ್ನು ವರಿ ಸಲು ನೀನು ಸಮ್ಮತಿಸಿರುವೆಯಾ? ಸೀತೆ, ನೀನಿನ್ನೂ ಸಮ್ಮತಿಸಿಲ್ಲವೆಂದು ಹೇಳಲಾರೆಯಾ? ಬೇಗನೆ ಹೇಳಿ ನನ್ನ ಮನಸ್ಸನ್ನು ಶಾಂತಗೊಳಿಸ ಲಾರೆಯಾ? ಅವರೊಡನೆ ಮದುವೆಯಾಗಲು ನೀನು ಒಪ್ಪಿದ್ದೀಯಾ?"

"ವಿವಾಹಕ್ಕೆ ಸಮ್ಮತಿಯನ್ನು ನಾನಿನ್ನೂ ಕೊಟ್ಟಿಲ್ಲ."

"ಹಾಗಾದರೆ ದೇವರು ನನ್ನ ಕೈಯನ್ನು ಇನ್ನೂ ಬಿಟ್ಟಿಲ್ಲ. ಸೀತೆ, ನಾನು ಇನ್ನೂ ಆಶೆ ಹಿಡಿದುಕೊಂಡಿರಲೆ?........ಆಶೆ ಹಿಡಿದುಕೊಂಡಿರಲೆ?"

ಸೀತೆಯ ಕಂಗಳಿಂದ ನೀರು ಪ್ರವಾಹರೂಪವಾಗಿ ಹರಿದು, ಅವಳ ಕಪೋಲಗಳನ್ನು ತೋಯಿಸಿತು. ಅನಂತನ ಮೇಲಿದ್ದ ಅವಳ ಪ್ರೇಮವು ಚೆನ್ನಾಗಿ ಬಡಿದೆಬ್ಬಿಸಿದಂತಾಯಿತು. "ನಾನೇನು ಹೇಳಲಿ? ಎಲ್ಲವೂ ಈಶ್ವ ರಾಧೀನ!" ಅವಳು ಹೇಳಿದಳು.

"ಹಾಗಾದರೆ ನನ್ನ ಮೇಲೆ ನಿನ್ನ ಕೃಪಾದೃಷ್ಟಿಯು ಬಿದ್ದಿತೆಂದು ಭಾವಿಸಲೆ? ನನ್ನನ್ನು ವರಿಸಲು ನಿನ್ನ ಆಕ್ಷೇಪವಿಲ್ಲವೆಂದು ಅರ್ಥಮಾಡಿ ಕೊಳ್ಳಲೆ?"

"ನಾನಂತೂ ಸುಖ ಬೇಡಿ ಬಂದಿಲ್ಲ. ನನ್ನಿಂದಾದಷ್ಟು ಮಟ್ಟಿಗೆ ಪರೋಪಕಾರಮಾಡಬೇಕೆಂದಿದ್ದೇನೆ. ಒಂದು ವೇಳೆ ನನ್ನಿಂದ ಯಾವ ತರದ ಪರೋಪಕಾರವಾಗದಿದ್ದರೂ ಚಿಂತೆಯಿಲ್ಲ; ಯಾವುದೊಂದು ಪ್ರಾಣಿಗೂ ನನ್ನಿಂದಾಗಿ ಒಂದಿಷ್ಟು ಕಷ್ಟವಾಗಲಿ ವ್ಯಥೆಯಾಗಲಿ ಆಗದಂತೆ ನೋಡಿಕೊಳ್ಳುವುದೆ ನನ್ನ ಪರಮಧರ್ಮವೆಂಬುದಾಗಿ ಭಾವಿಸಿದ್ದೇನೆ."

"ನೀನು ನನ್ನನ್ನು ಮದುವೆಯಾದರೆ ನನ್ನ ಮೇಲೆ ಉಪಕಾರದ ಹೊರೆಯನ್ನು ಹೇರಿದಂತಾಗುತ್ತದೆ."

"ಆದರೆ ನಿನ್ನ ಹೆತ್ತವರೂ ನನ್ನಮ್ಮನೂ ಇದನ್ನೊಪ್ಪಬೇಕಲ್ಲ? ಅವರ ಮನಸ್ಸಿಗೆ ವ್ಯಥೆಯನ್ನುಂಟುಮಾಡಿ ನನಗೆ ಸ್ವರ್ಗಸುಖ ಸಿಗುವುದಾದರೂ ಬೇಡ. ಅವರೊಪ್ಪದಿದ್ದರೆ ನಾನು ವಿವಾಹಕ್ಕೆ ಸಿದ್ಧಳಿಲ್ಲ."

"ದೇವಿ, ನಿನಗೆ ಸುಖ ಸಿಗುವಾಗ ತಡೆಯಲು ನಿನ್ನ ತಾಯಿಯು ಹೆತ್ತ ಕರುಳಃ ಒಪ್ಪುವುದೆ? ನನ್ನ ತಂದೆಯವರು ಪೆನ್‌ಶನರರಾದರೂ, ಸುಸಂಸ್ಕೃತರು; ಸುಧಾರಿತ ಮನೋವೃತ್ತಿಯವರು. ಅವರು ಆಕ್ಷೇಪಿಸಲಾರರು. ಆದರೆ ನನ್ನ ತಾಯಿ ಸುಲಭವಾಗಿ ಒಪ್ಪುವಂತಿಲ್ಲ. ಅವಳನ್ನೊಪ್ಪಿಸುವುದು ನನ್ನ ಕೆಲಸ. ನನ್ನನ್ನು ಹೊರತು ಬೇರೆಯವರನ್ನು ವಿವಾಹವಾಗುವುದಿಲ್ಲ ವೆಂಬುದಾಗಿ ಮಾತುಕೊಡು."

ಸೀತೆಯು ವಚನವಿತ್ತಳು. ಅನಂತನು ಅದುರುತ್ತಿರುವ ಅವಳ ಎರಡು ಕೈಗಳನ್ನೂ ಹಿಡಿದುಕೊಂಡು ಮೃದುವಾಗಿ, "ನನ್ನ ಸೀತೆ, ಹಿಂದೊಮ್ಮೆ ನೀನು ನನ್ನಿಂದ ತಪ್ಪಿಸಿಕೊಂಡು ಬೇರೊಬ್ಬನನ್ನು ವರಿಸಿದೆ. ಆಗ ನಾನು ಸಣ್ಣವನಿದ್ದೆ; ಅಲ್ಲದೆ ನಾನು ನಿನ್ನನ್ನು ನೋಡಿಯೂ ಇರಲಿಲ್ಲ. ನಿನ್ನ ಮೌಲ್ಯವು ನನಗೆ ತಿಳಿದಿರಲಿಲ್ಲ. ಈಗ ನಿನ್ನನ್ನು ಬಿಡುವೆನೆ? ಇಗೋ,

ಭಗವಾನ್ ಸೂರ್ಯನಾರಾಯಣನ ಸಾಕ್ಷಿಯಾಗಿ ನಿನ್ನ ಪಾಣಿಗ್ರಹಣ ಮಾಡಿಕೊಂಡಿದ್ದೇನೆ. ಇನ್ನು ಎಂದೆಂದಿಗೂ ನೀನು ನನ್ನವಳು; ನಾನು ನಿನ್ನವನು. ಮೊದಲು ನನ್ನ ತಾಯ್ತಂದೆಯರ ಅನುಮತಿ ಪಡೆದು, ಆ ಮೇಲೆ, ನಿನ್ನ ತಾಯಿಯನ್ನು ಕೇಳೋಣ. ಇನ್ನು ಮನೆಗೆ ಹೋಗೋಣವೆ?"

ಅನಂತನ ಸಂತೋಷಕ್ಕೆ ಪಾರವೆ ಇಲ್ಲ. ದೇವರನ್ನೆ ನಂಬಿದ್ದ ಸೀತೆಗೆ ಸಂತೋಷವಾಗಲೂ ಇಲ್ಲ; ದುಃಖವಾಗಲೂ ಇಲ್ಲ. ಅವಳು ಮೆಲ್ಲಮೆಲ್ಲನೆ ಅನಂತನನ್ನು ಹಿಂಬಾಲಿಸಿದಳು.

---

## ೧೩

ಸೀತೆಯು ಒಪ್ಪಿದರೂ, ಕಾವೇರಮ್ಮನು ಈ ವಿವಾಹಕ್ಕೆ ಸಮ್ಮತಿ ಕೊಡಲಿಲ್ಲ. ಅಂದು ರಾತ್ರಿ ಊಟಕ್ಕೆ ಕುಳಿತಿದ್ದಾಗ ಅನಂತನು ಮೆಲ್ಲನೆ ವಿವಾಹದ ಮಾತೆತ್ತಿದ. ಅವನು ಸೀತೆಯನ್ನು ವರಿಸುವ ಇಚ್ಛೆಯನ್ನು ವ್ಯಕ್ತಗೊಳಿಸಿದಾಗ ಕಾವೇರಮ್ಮನ ತಲೆಯ ಮೇಲೆ ದೊಡ್ಡ ಕಲ್ಲನ್ನು ಹೊತ್ತುಹಾಕಿದಂತಾಯಿತು. ಒಂದೆರಡು ಗಳಿಗೆ ಅವಳ ಬಾಯಿಯಿಂದ ಮಾತೇ ಹೊರಡಲಿಲ್ಲ. ಕಡೆಗೆ ಕಣ್ಣಲ್ಲಿ ನೀರು ತಂದುಕೊಂಡು, ಗದ್ಗದ ಕಂಠದಿಂದ ಹೇಳತೊಡಗಿದಳು—"ಮಗೂ, ನಿನ್ನ ಹೆತ್ತವರನ್ನು ಈ ಮುದಿ ಪ್ರಾಯದಲ್ಲಿ ಕಡೆಗಣಿಸುವೆಯಾ? ಆ ಸೀತೆಯು ಒಳ್ಳೆಯವಳೆಂದು ನಾನು ಭಾವಿಸಿದ್ದೆ. ಇಂತಹ ಮಾಯಾವಿಯೆಂದು ಗೊತ್ತಿದ್ದರೆ ಆಕೆಯನ್ನು ನಮ್ಮ ಹೊಸ್ತಿಲು ದಾಟಬರಲು ಬಿಡುತ್ತಿರಲಿಲ್ಲ. ನೀನಾದರೂ ಅವರಲ್ಲಿಗೆ ಹೋಗದಂತೆ ನೋಡಿಕೊಳ್ಳುತ್ತಿದ್ದೆ. ಮಗೂ, ನೀನು ಆಕೆಯ ಮಾಯಾಜಾಲದಲ್ಲಿ ಸಿಕ್ಕಿಬಿದ್ದೆಯಾ? ಏನೂ ಅರಿಯದ ನೀನು ಆ ರಾಕ್ಷಸಿಯ ದವಡೆಯೊಳಗೆ ಸಿಲುಕುವಂತಾಯಿತೇ? ನಾಗರ ಹಾವಿಗೆ ಮಣಿಯನ್ನು ಕೊಟ್ಟ ದೇವರು ಈ ಪಿಶಾಚಿಗೆ ಸೌಂದರ್ಯವನ್ನೂ ಕೊಟ್ಟಿರುವನು!"

"ಅಮ್ಮಾ, ನಿರಪರಾಧಿಯಾದ ಸೀತೆಯನ್ನು ನೀನು ವೃಥಾ ಬಯ್ಯುವೆಯೇಕೆ? ಆಕೆಯು ತಾನಾಗಿ ವಿವಾಹದ ಪ್ರಸ್ತಾಪವನ್ನೆತ್ತಲಿಲ್ಲ. ನಾನಾಗಿ ಎಷ್ಟೋ ಹೇಳಿ ಬೇಡಿಕೊಂಡ ಮೇಲೆ ನನ್ನ ಬಲಾತ್ಕಾರದಿಂದಲೊ ಎಂಬಂತೆ ಸಮ್ಮತಿಯಿತ್ತಳು. ಆದರೂ ನೀನು ಸಮ್ಮತಿಸದಿದ್ದರೆ ವಿವಾಹಕ್ಕೆ ತಾನು ಸಿದ್ಧಳಿಲ್ಲವೆಂಬುದಾಗಿ ಸ್ಪಷ್ಟವಾಗಿ ಹೇಳಿರುವಳು. ಅಮ್ಮಾ, ನಿನ್ನ ಏಕಮಾತ್ರ ಪುತ್ರನಾದ ನನ್ನ ಮೇಲೆ ದಯೆಯಿಲ್ಲವೆ? ನಾನು ಸುಖದಿಂದ ಬಾಳಬೇಕೆಂದು ನೀನಿಚ್ಛಿಸುವುದಿಲ್ಲವೆ? ನನ್ನ ಹೃದಯೇಶ್ವರಿಯಾದ ಸೀತೆಯನ್ನು ವರಿಸಲು ಸಮ್ಮತಿ ಕೊಡಲಾರೆಯಾ? ಅಮ್ಮಾ!"

ಕಾವೇರಮ್ಮನ ಕೋಪವು ನೆತ್ತಿಗೇರಿತು. "ಆ ಹುಚ್ಚು ಮುಂಡೆಗೆ ಈ ಯುಕ್ತಿ ಬೇರೆ! ನನ್ನ ಸಮ್ಮತಿಯಿಲ್ಲದಿದ್ದರೆ ಆಕೆಯು ಮದುವೆಯಾಗುವುದಿಲ್ಲವಂತೆ! ಛೀ! ನನ್ನ ಮಗನು 'ಮುಂಡೇಗಂಡ'ನಾಗಲು ನಾನು ಸಮ್ಮತಿಸಬೇಕಂತೆ! ಸತ್ತುಹೋಗಲಿ ಆ ರಂಡೆ! ನಾನು ನನ್ನ ಒಪ್ಪಿಗೆಯನ್ನು ಜೀವ ಹೋದರೂ ಕೊಡಲಿಕ್ಕಿಲ್ಲ. ನನ್ನ ಮಾತನ್ನು ಕೇಳಿ ಸುಖದಿಂದಿರುವೆಯಾದರೆ ಲೀಲೆಯನ್ನು ಮದುವೆಯಾಗು. ಲೀಲೆಯು ಆಕೆಯ ತಂಗಿಯಲ್ಲವೆ! ಲೀಲೆಯು ಯಾವ ವಿಷಯದಲ್ಲಿ ಕಡಿಮೆ? ಹಿಂದೆ ಮದುವೆಯ ಮಾತೆತ್ತಿದಾಗ ನೀನು ಕೋಪಿಸಿಕೊಂಡು, ನಿನಗೆ ಮದುವೆಯೆ ಬೇಡವೆಂಬುದಾಗಿ ಹೇಳುತಿದ್ದೆ. ಅಷ್ಟು ದೃಢವಾಗಿದ್ದ ನಿನ್ನ ಮನಸ್ಸನ್ನು ಆ ಮಾರಿಯು ಕೆಡಿಸಿಬಿಟ್ಟಳೆ?"

"ಅಮ್ಮಾ, ಸೀತೆಯನ್ನು ದೂರಬೇಡ. ಆಕೆಯನ್ನು ಹೀಗೆ ಮನಸ್ಸಿಗೆ ಬಂದಂತೆ ಬಯ್ಯುವುದನ್ನು ಕೇಳಿ ನನಗಾಗುವ ವ್ಯಥೆಯನ್ನು ನೀನು ತಿಳಿದಿಲ್ಲ. ಸೀತೆಯ ವಿಷಯದಲ್ಲಿ ನಿನ್ನ ಆಕ್ಷೇಪವೇ, ಅಥವಾ ವಿಧವಾವಿವಾಹಕ್ಕೆ ನಿನ್ನ ಆಕ್ಷೇಪವೇ? ಸ್ಪಷ್ಟವಾಗಿ ತಿಳಿಸು."

"ಸೀತೆಯು ಕನ್ನೆಯಾಗಿದ್ದರೆ ನನ್ನ ಆಕ್ಷೇಪವೆ ಇರಲಿಲ್ಲ. ಅದರೆ ವಿಧವೆಯಾದ ಅವಳು ನಿನ್ನನ್ನು ಈ ರೀತಿ ಮೋಸಗೊಳಿಸಬಾರದಾಗಿತ್ತು.

ನಮ್ಮ ಧರ್ಮಪ್ರಕಾರ ಬೇರೆ ಬೇರೆ ವರ್ಣದವರಿಗೆ ಬೇರೆ ಬೇರೆ ಉದ್ಯೋಗ ಗಳೂ ಬೇರೆ ಬೇರೆ ಆಶ್ರಮದವರಿಗೆ ಬೇರೆ ಬೇರೆ ಕರ್ತವ್ಯಕರ್ಮಗಳೂ ನಿಯ ಮಿಸಲ್ಪಟ್ಟಿವೆ. ಹಿಂದಿನ ಋಷಿವರ್ಯರಿಂದ ಸ್ಥಾಪಿಸಲ್ಪಟ್ಟ ಈ ನಿಯಮ ಗಳನ್ನು ಮೀರಿ ನಡೆಯುವುದು ಎಂದಿಗೂ ಶ್ರೇಯಸ್ಕರವಲ್ಲ. ಸೀತೆಯು ವಿಧವೆಯಾದುದರಿಂದ ಧರ್ಮನಿಷ್ಠೆಯಾಗಿ ದೇವರ ಧ್ಯಾನದಲ್ಲಿ ದಿನ ಗಳೆಯಬೇಕು."

"ಅಮ್ಮಾ, ನೀನು ಹೇಳುವುದು ಸರಿಯಾದರೆ, ಅಪ್ಪನು ಈ ಮೂಲೆ ಯಲ್ಲೂ ನಾನು ಆ ಮೂಲೆಯಲ್ಲೂ ಬೆಳಗಿನಿಂದ ಸಾಯಂಕಾಲದ ವರೆಗೆ ಮೂಗು ಹಿಡಿದುಕೊಂಡು ಕುಳಿತಿರಬೇಕಾಗಿತ್ತು. ನನ್ನನ್ನು ವಕಾಲತಿಗೇಕೆ ಕಳುಹಿಸಿದಿರಿ? ಬ್ರಾಹ್ಮಣರಾದ ನಮಗೆ ವಕಾಲತು ಒಪ್ಪುವುದೇ? ಅಪ್ಪನು ಪೋಲಿಸ್ ಖಾತೆಯಲ್ಲಿದ್ದುಕೊಂಡು ಎಷ್ಟೋ ಮಂದಿ ಕೇಡಿಗಳನ್ನು ದಸ್ತಗಿರಿ ಮಾಡಿರುವನು. ನಾನು ಹೇಳುವುದಾದರೆ, ಇಡಿ ದಿನ ಜಪ-ತಪ ಮಾಡು ವುದಕ್ಕಿಂತಲೂ ಲೋಕಕಂಟಕರನ್ನು ಹಿಡಿದು, ಶಿಕ್ಷೆಗೆ ಗುರಿಪಡಿಸಿ, ಅಪ್ಪನು ಹೆಚ್ಚಿನ ಸುಕೃತಮಾಡಿರುವನು............"

ಹೊರಗೆ ಪೇಪರನ್ನು ಓದುತ್ತ ಕುಳಿತಿದ್ದ ಗೋಪಾಲರಾಯರು ಇವರ ಸಂವಾದವನ್ನು ಕೇಳಿ, ಪೇಪರನ್ನು ಕೈಯಲ್ಲಿ ಹಿಡಿದುಕೊಂಡೆ ಅಡಿಗೆ ಕೋಣೆಯನ್ನು ಸೇರಿದರು.

"ನಿಮ್ಮ ಮಗನಿಗೆ ಹುಚ್ಚು ಹಿಡಿದಿದೆ. ಸ್ವಲ್ಪ ಬಿಡಿಸಲೊಲ್ಲಿರೆ? ನಮ್ಮಣ್ಣನ ಮಗಳು—ಆ ವಿಧವೆ— ಸೀತೆಯನ್ನು ಮದುವೆಯಾಗುವನಂತೆ! ನಮ್ಮ ಸಮ್ಮತಿಯನ್ನು ಕೊಡಬೇಕಂತೆ! ತಾನು ಹೇಳುವುದು ಸರಿಯೆಂದು ತೋರಿಸಲಿಕ್ಕಾಗಿ ಮದ್ರಾಸಿನಲ್ಲಿ ಒಂದು ವರ್ಷ ಕಲಿತ ಕಾನೂನನ್ನೆಲ್ಲಾ ನನ್ನಿದಿರು ಪ್ರದರ್ಶಿಸತೊಡಗಿರುವನು. ಏನೂ ತಿಳಿಯದ ನನ್ನ ಬಾಯಿ ಯನ್ನು ಇವನು ಬೇಗನೆ ಮುಚ್ಚಬಹುದು. ನೀವೇ ಇವನೊಡನೆ ಚರ್ಚಿಸಿ ಇವನ ಹುಚ್ಚು ಕಲ್ಪನೆಯನ್ನೆಲ್ಲಾ ತೊಲಗಿಸಿಬಿಡಿರಿ" ಕಾವೇರಮ್ಮನೆಂದಳು.

ಗೋಪಾಲರಾಯರು, "ಅನಂತೂ, ಕೋಲೇಜಿನಲ್ಲಿದ್ದಾಗ ನನಗೂ ಇಂತಹ ಹುಚ್ಚು ಕಲ್ಪನೆಗಳು ಬಂದಿದ್ದುವು. ನಾವು ಯಾವುದೊಂದು ಹೆಜ್ಜೆಯನ್ನಿಡುವಾಗಲೂ ಚೆನ್ನಾಗಿ ವಿಚಾರಿಸಿ ನೋಡಬೇಕು. ಒಬ್ಬ ಪುರುಷನೂ ಓರ್ವ ಸ್ತ್ರೀಯೂ ಪರಸ್ಪರ ಆಕರ್ಷಿತರಾಗಿ ವಿವಾಹವಾಗಲಿಚ್ಛಿಸಿದರೆ, ನಡುವೆ ಬರಲು ಸಮಾಜಕ್ಕೆ ಯಾವ ತರದ ಹಕ್ಕೂ ಇಲ್ಲವೆಂದು ನನ್ನ ನಂಬುಗೆ. ಆದರೆ ನಾವು ನೋಡುತ್ತೇವೇನನ್ನು! ಅರಸನಾದವನೂ ತನ್ನೊಲುಮೆಯ ನಲ್ಲೆಯನ್ನು ವರಿಸಲು ಹವಣಿಸಿದಾಗ, ಸಮಾಜವು ಸುಮ್ಮನಿರಲಿಲ್ಲ! ಅದೂ ಅಲ್ಲದೆ, ಸಮಾಜದಲ್ಲಿ ಪ್ರತಿಷ್ಠಿತರೆಂದೆನಿಸಿಕೊಳ್ಳುವವರು ಸಮಾಜದಲ್ಲಿ ತಲೆದೋರಿರುವ ಮೂಢ ಕಲ್ಪನೆಗಳನ್ನೂ ಅಂಧಾಚಾರಗಳನ್ನೂ ತೊಲಗಿಸಿ, ಜನತೆಯ ಸುಖಸಾಧಿಸುವುದರ ಬದಲಾಗಿ, ವ್ಯಕ್ತಿಗಳ ವರ್ತನೆಯಲ್ಲಿ ಏನಾದರೂ ಹುಳುಕನ್ನು ಕಂಡುಹಿಡಿದು, ಅವರನ್ನು ಶಿಕ್ಷೆಗೆ ಗುರಿಪಡಿಸಿ, ಧರ್ಮರಕ್ಷಣೆ ಮಾಡಿದೆವೆಂದು ಭಾವಿಸಿ ಸಂತಸಬಡುತ್ತಾರೆ! ಹಿಂದುಸ್ಥಾನಕ್ಕೆ ಬ್ರಿಟಿಷರು ಸ್ವರಾಜ್ಯ ಕೊಡಲಿಲ್ಲವೆಂದು ಗಾಂಧಿಟೊಪ್ಪಿವಾಲರು ಬ್ರಿಟಿಷರನ್ನು ದೂರುತ್ತಾರೆ. ಆದರೆ ಈ ಸಮಾಜಗಳೂ ಮಠಗಳೂ ಕೂಡುಕಟ್ಟುಗಳೂ ಎಷ್ಟರ ಮಟ್ಟಿಗೆ ವ್ಯಕ್ತಿಯ ಸ್ವಾತಂತ್ರ್ಯವನ್ನು ಅಪಹರಿಸಿರುವುವೆಂದು ವಿಚಾರಿಸಿದರೆ, ನಮ್ಮ ಗುಲಾಮಗಿರಿಯು ಚೆನ್ನಾಗಿ ವ್ಯಕ್ತವಾದೀತು. ಅನಂತೂ, ಸಮಾಜದ ನಿಯಮಗಳನ್ನು ಅತಿಕ್ರಮಿಸಿ, ಬಂದುದಕ್ಕೆ ಎದೆಗೊಡಲು ಸಿದ್ಧನಿರುವೆಯಾ? ಸೀತೆಯಲ್ಲಿ ನಿನ್ನ ಪ್ರೇಮವು ಅಷ್ಟು ಅಗಾಧವಾಗಿದೆಯೆ?" ಎಂದರು.

ಅನಂತನ ಕಂಗಳಿಂದ ಆನಂದಬಾಷ್ಪಗಳುದುರತೊಡಗಿದುವು. "ಅಪ್ಪಾ, ಹಿಂದಿನಿಂದಲೂ ನಿನ್ನಭಿಪ್ರಾಯಕ್ಕೆ ನಾನು ಹೆಚ್ಚಿನ ಮಹತ್ವ ಕೊಡುತ್ತಿರುವೆನು. ಯಾವ ವಿಷಯದಲ್ಲಿಯೂ ಚೆನ್ನಾಗಿ ವಿವೇಚಿಸದೆ ನೀನು ಮಾತಾಡುವವನಲ್ಲವೆಂದು ನನಗೆ ಗೊತ್ತಿದೆ. ಅಪ್ಪಾ, ಸೀತೆಯನ್ನು ನೋಡುವ ವರೆಗೆ ಪವಿತ್ರಪ್ರೇಮವೆಂದರೇನೆಂದು ನನಗೆ ಗೊತ್ತಿರಲಿಲ್ಲ. ನನ್ನ ಭಾವೀಪತ್ನಿಯಲ್ಲಿ ಸೌಂದರ್ಯವೊಂದಿದ್ದರೆ ಸಾಕೆಂಬುದಾಗಿ ನನ್ನ

ಭಾವನೆಯಾಗಿತ್ತು. ಸೀತೆಯು ಸುಂದರಿಯೇನೊ ನಿಜ; ಆದರೆ, ನಾನು ಮೋಹಿತನಾಗಿರುವುದು ಆಕೆಯ ಸೌಂದರ್ಯಕ್ಕಾಗಿ ಮಾತ್ರವಲ್ಲ. ಆಕೆಯಂತಹ ಸುಸಂಸ್ಕೃತ ಜೀವವು ಬೇರೊಂದಿಲ್ಲ. ನಾನಾಕೆಯನ್ನು ನನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತೇನೆ. ಈ ವಿಷಯದಲ್ಲಿ ನಿನಗೆ ಳ್ಳಿಷ್ಟೂ ಸಂಶಯಬೇಡ. ನೀನು ಸಮ್ಮತಿಸುವೆಯೆಂದು ನಾನು ಮೊದಲೆ ತಿಳಿದಿದ್ದೆ. ಅಮ್ಮನು ಆಕ್ಷೇಪಿಸದಂತೆ ಮಾಡಲಾರೆಯಾ?"

"ನೀನಿನ್ನೂ ಸಣ್ಣವನಲ್ಲ. ಯುಕ್ತಾಯುಕ್ತ ವಿಚಾರ ತಿಳಿಯಲು ತಕ್ಕವನಿರುವೆ. ಸೀತೆಯನ್ನು ಮದುವೆಯಾಗುವುದು ಶ್ರೇಯಸ್ಕರವೆಂದು ಖಂಡಿತವಾಗಿ ನಿರ್ಧರಿಸಿರುವೆಯಾ? ಚೆನ್ನಾಗಿ ಪುನರಾಲೋಚಿಸಿ ನೋಡು."

"ನಾನು ಚೆನ್ನಾಗಿ ಆಲೋಚಿಸಿಯೆ ಈ ನಿರ್ಧಾರಕ್ಕೆ ಬಂದಿರುವುದು. ಲೀಲೆಯು ಎಲ್ಲ ವಿಷಯಗಳಲ್ಲೂ ಸೀತೆಗೆ ಸರಿಮಿಗಿಲೆಂದು ನಾನು ಬಲ್ಲೆ. ಆದರೂ ಸೀತೆಯನ್ನು ಬಿಟ್ಟು ಲೀಲೆಯನ್ನು ಪ್ರೀತಿಸಬೇಕೆಂದು ನಾನು ಪಟ್ಟ ಪ್ರಯತ್ನವು ನಿಷ್ಫಲವಾಗಿರುವುದು. ಇನ್ನು ಈ ವಿಷಯದಲ್ಲಿ ಯೋಚಿಸುವುದೇನೂ ಇಲ್ಲ. ಸೀತೆಯಲ್ಲದೆ ಬೇರಾರನ್ನೂ ನಾನು ಖಂಡಿತ ಮದುವೆಯಾಗಲಾರೆ."

"ಹಾಗಾದರೆ ನಿನ್ನಿಷ್ಟದಂತೆ ವರ್ತಿಸು. ಸಮಾಜಸುಧಾರಕನಾಗಬೇಕೆಂಬ ಹೆಬ್ಬಯಕೆ ನನಗೂ ಇತ್ತು. ವಿಧವೆಯನ್ನೇ ಮದುವೆಯಾಗಬೇಕೆಂದು ನಾನೂ ಒಮ್ಮೆ ನಿರ್ಧರಿಸಿದ್ದೆ. ಆದರೆ ನನ್ನ ತಂದೆಯು ಈಕೆಯನ್ನು ನನ್ನ ಕುತ್ತಿಗೆಗೆ ಕಟ್ಟಲು ಹವಣಿಸಲು, ಇದಿರಾಡದೆ ವಿಧೇಯನಾಗಿ ವರ್ತಿಸಿದೆ. ನೀನು ಸೀತೆಯನ್ನು ವಿವಾಹವಾಗಲು ನನ್ನ ಸಂಪೂರ್ಣ ಸಮ್ಮತಿಯಿದೆ. ನಿಮ್ಮಿಬ್ಬರಿಗೂ ಸರ್ವ ಸೌಖ್ಯವನ್ನೂ ಕರುಣಿಸೆಂದು ದೇವರೊಡನೆ ಪ್ರಾರ್ಥಿಸುತ್ತೇನೆ."

ಅನಂತನು ಆನಂದಾತಿರೇಕದಿಂದಲೂ ಕೃತಜ್ಞತೆಯಿಂದಲೂ ಗೋಪಾಲರಾಯರ ಕಾಲಿಗೆರಗಿ, ಅವರ ಪಾದಾರವಿಂದವನ್ನು ಕಣ್ಣೀರಿಂದ ತೊಳೆದ.

ಗೋಪಾಲರಾಯರು ಪತ್ನಿಯನ್ನುದ್ದೇಶಿಸಿ, "ಕಾವೇರಿ, ನಮಗಿರು ವವನು ಇವನೊಬ್ಬನೆ ಮಗ. ಇವನ ಶ್ರೇಯಸ್ಸನ್ನು ಬಯಸುವುದೆ ನಮ್ಮ ಕರ್ತವ್ಯ. ಇಂತಹಳನ್ನೆ ಮದುವೆಯಾಗಬೇಕೆಂದು ನಾವು ಇವನಿಗೆ ಒತ್ತಾಯಮಾಡುವುದೂ, ಇವನೊಪ್ಪದ ಹುಡುಗಿಯೊಂದಿಗೆ ಇವನ ಮದುವೆ ಯನ್ನು ಜರಗಿಸುವುದೂ ಯುಕ್ತವಲ್ಲ. ಏಕೆಂದರೆ, ನಾಳೆ ಅವಳೊಡನೆ ಸಂಸಾರ ಹೂಡಬೇಕಾದವನು ಇವನು; ನಾವಲ್ಲ! ಆದುದರಿಂದ ಸಂತೋಷ ದಿಂದ ಸಮ್ಮತಿಸು" ಎಂದರು.

"ನೀವಾದರೂ ನನ್ನ ಪಕ್ಷ ಹಿಡಿದು ಮಾತಾಡುತ್ತೀರೆಂದು ಭಾವಿ ಸಿದ್ದೆ. ನೀವೂ ಅವನ ಕಡೆ ಸೇರಿದಿರೇನು? ಆ ಮುಂಡೆಯನ್ನು ಸೊಸೆ ಯಾಗಿ ನಿಮ್ಮ ಮನೆಗೆ ಬರಮಾಡಿಕೊಳ್ಳಿ! ಅವನಿಗೆ ಹುಡುಗಾಟಿಕೆಯೆಂದು ಹೇಳಬಹುದು; ನಿಮಗೆ ಮುದಿಭ್ರಾಂತಿ ಹತ್ತಿದೆಯೆಂದು ಅನ್ನಬೇಕೆ? ನಾನು ಜೀವಂತೆಯಾಗಿರುವ ವರೆಗೂ ಅನಂತನು ಸೀತೆಯನ್ನಾಗಲಿ, ಬೇರಾವ ಮುಂಡೆಯನ್ನಾಗಲಿ ವರಿಸಲು ಬಿಡಲಿಕ್ಕಿಲ್ಲ! ಒಂದು ವೇಳೆ ಮಾತೆಯ ಮಾತಿಗೆ ಬೆಲೆಗೊಡದೆ, ಅವನು ಮದುವೆಯಾದುದೆ ಆದರೆ, ನಾನು ಉತ್ತರಕ್ಷಣದಲ್ಲೆ ಬಾವಿಗೆ ಹಾರಿ ಪ್ರಾಣಬಿಡುವೆ."

"ಅಮ್ಮಾ, ಕೋಪವಶಳಾಗಬೇಡ. ನಿನ್ನ ಮಾತನ್ನು ಮೀರಿ ಮದುವೆಯಾಗುವೆನೆಂದು ಎಂದಿಗೂ ಭಾವಿಸದಿರು. ನೀನು ಕೊನೆಯ ವರೆಗೂ ಸಮ್ಮತಿಸದಿದ್ದರೆ ನಾನು ಇಡಿ ಆಯುಷ್ಯವನ್ನು ಬ್ರಹ್ಮಚಾರಿ ಯಾಗಿಯೆ ಕಳೆಯುತ್ತೇನೆ. ನಾನು ಅವಿವಾಹಿತನಾಗಿ ಉಳಿಯುವುದಕ್ಕೆ ನಿನ್ನ ಆಕ್ಷೇಪವಿಲ್ಲವಷ್ಟೆ!"

"ಮಗೂ, ಹಾಗೆಂದರೆ ಆಗುತ್ತದೆಯೆ? ನೀನು ಮದುವೆಯಾಗಿ ಮಕ್ಕಳನ್ನು ಪಡೆಯಬೇಡವೆ? ನಾನು ಮೊಮ್ಮಕ್ಕಳನ್ನೆತ್ತಿ ಆಡಿಸಬೇಡವೆ? ನಿನ್ನ ಈ ಹುಚ್ಚನ್ನು ಬಿಟ್ಟು, ಬೇಕಾದ ಕನ್ಯೆಯನ್ನು ವರಿಸು. ನಾನೇನು ಬೇಡವೆಂಬೆನೆ? ಅನಂತೂ, ವಿಧವೆಯನ್ನು ಮದುವೆಯಾದರೆ, ಸ್ವಾಮಿ ರಾಯರು ನಿಶ್ಚಯವಾಗಿಯೂ ನಿನ್ನನ್ನು ಬಹಿಷ್ಕರಿಸುವರು. ಆ ಮೇಲೆ

ನಮ್ಮನ್ನು ಮೋಕ್ಷಕ್ಕೆ ಕಳುಹಿಸುವವರಾರು? ನಮಗೆ ಸದ್ಗತಿಯನ್ನೊದಗಿಸಬೇಕಾದುದು ನಿನ್ನ ಕರ್ತವ್ಯವಲ್ಲವೆ? ವಿಚಾರಿಸಿ ನೋಡು. ಎಷ್ಟೊ ಸುಧಾರಣೆಗಳು ಇತ್ತೀಚೆ ಆಗಲಿಲ್ಲವೆ? ಹಾಗೆಯೇ ಇದೂ ಕ್ರಮೇಣ ಆಗುವುದು ನಿಶ್ಚಯ. ಆದರೆ ಸಮಾಜವನ್ನು ಕೆಣಕುವ ವ್ಯಾಪಾರ ನಮಗೇಕೆ? ದೇವರು ನಮಗೆ ಕರುಣಿಸಿದ ಅನ್ನವನ್ನೊ ಉಪ್ಪನ್ನೊ ತಿಂದು ನಮ್ಮಷ್ಟಕ್ಕೆ ಇರುವುದು ಹೇಗೆ? ಹಾದಿಹಿಡಿದು ಹೋಗುತ್ತಿರುವ ಮಾರಿಯನ್ನು ಮನೆಗೆ ಕರೆದುಕೊಳ್ಳುವುದು ಹೇಗೆ? ನಾನು ಹೇಳುವುದೆಲ್ಲವೂ ನಿನ್ನ ಹಿತಕ್ಕಾಗಿಯೆ ಅಲ್ಲವೆ?"

ಗೋಪಾಲರಾಯರು, "ಅನಂತೂ, ಈಗ ಅವಸರದಿಂದ ಪ್ರಯೋಜನವೇನು? ಇನ್ನು ಕೆಲವು ದಿನ ದಾಟಲಿ. ನಿನ್ನ ಮನಸ್ಸನ್ನು ಬದಲಾಯಿಸಲು ಸಾಧ್ಯವಿದೆಯೊ ಎಂದು ಯತ್ನಿಸಿ ನೋಡು. ಒಂದು ವೇಳೆ ಅದು ಅಸಾಧ್ಯವೆಂದಾದರೆ, ನಿನ್ನ ತಾಯಿಯ ಮನಸ್ಸಿನಲ್ಲಿ ಪರಿವರ್ತನೆಯಾಗಬಹುದು. ಇನ್ನು ನಿನಗೆ ಮದರಾಸಿಗೆ ಹೋಗಲು ಕೆಲವೆ ದಿನಗಳಿವೆ. ಮದುವೆಯಾಗುವುದಾದರೂ ಬರುವ ಎಪ್ರಿಲ್, ಮೇ ತಿಂಗಳಲ್ಲಲ್ಲವೆ? ಅಷ್ಟರೊಳಗೆ ಏನೇನಾಗುತ್ತದೊ ಯಾರು ಬಲ್ಲರು!" ಎಂದರು.

---

## ೧೪

ಅನಂತ-ಸೀತೆಯರ ಪ್ರೇಮ ಪ್ರಸಂಗವು ಅವರಿಬ್ಬರಿಗೂ ಕಾವೇರಮ್ಮ, ಗೋಪಾಲರಾಯರಿಗೂ ಮಾತ್ರ ಗೊತ್ತಿದ್ದಿತು. ಬೇರಾರಿಗೂ ಅದರ ಗಂಧವೂ ಹತ್ತಿರಲಿಲ್ಲ. ತನ್ನ ತಾಯಿ ಸಮ್ಮತಿಸಿದ ಮೇಲೆಯೆ ಚಂದ್ರಭಾಗಮ್ಮನ ಸಮ್ಮತಿ ಕೇಳುವುದು ಯುಕ್ತವೆಂಬುದಾಗಿ ಅನಂತನು ನಿಶ್ಚಯಿಸಿದ. ಸೀತೆಯೂ ಅದಕ್ಕೊಪ್ಪಿದಳು. ಅನಂತನು ಎಂದಿನಂತೆ ಚಂದ್ರಭಾಗಮ್ಮನ ಮನೆಗೆ ಹೋಗಿ, ವಿನೋದವಾಡಿ ಹಿಂದಿರುಗುತಿದ್ದ.

ಅವನು ಮದರಾಸಿಗೆ ಹೊರಡುವ ದಿನ ನಿಶ್ಚಯವಾಯಿತು. ಆ

ದಿನದ ಹಿಂದಿನ ದಿವಸ ಮಧ್ಯಾಹ್ನ ಊಟಕ್ಕೆ ಚಂದ್ರಭಾಗಮ್ಮನು ಅವನನ್ನು ಆಮಂತ್ರಿಸಿದ್ದಳು.

ಸಾಯಂಕಾಲ ಕಾಫಿಕುಡಿದಾದನಂತರ ಸೀತೆ-ಲೀಲೆಯರೊಂದಿಗೆ ಅನಂತನು ತಿರುಗಾಡಲು ಹೊರಟ. ಶುಭ ಸಮಾಚಾರವನ್ನು ಲೀಲೆಗೆ ತಿಳಿಸದಿರಲು ಅವನಿಗೆ ಮನಸ್ಸು ಬರಲಿಲ್ಲ. ಸುಮ್ಮನಿರಬೇಕೆಂಬುದಾಗಿ ಸೀತೆಯು ಎಷ್ಟು ಸನ್ನೆಮಾಡಿದರೂ ಅವನು ಲಕ್ಷಿಸಲೆ ಇಲ್ಲ.

"ಲೀಲೆ, ನಿನಗೊಂದು ಸಂತೋಷದ ಸುದ್ದಿಯನ್ನು ಹೇಳುತ್ತೇನೆ. ನೀನದನ್ನು ಯಾರೊಡನೆಯೂ ಹೇಳಕೂಡದು ತಿಳಿಯಿತೆ? ನಿನ್ನ ಅತ್ಯಂತ ಮಿತ್ರರೊಡನೆಯೂ, ತಾಯಿಯೊಡನೆ ಸಹ, ಹೇಳುವುದಿಲ್ಲವೆಂದು ಭಾಷೆ ಕೊಡಬೇಕು. ಆಗ ಮಾತ್ರ ಹೇಳುತ್ತೇನೆ."

"ಭಾವಯ್ಯಾ, ಬೇರೆಯವರೊಡನೆ ಹೇಳಬಾರದ ಸಂತೋಷ ಸಮಾಚಾರವಾದರೂ ಇದೆಯೆ? ಒಬ್ಬಿಬ್ಬರೊಡನಾದರೂ ಹೇಳದಿರಲಾಗುತ್ತದೆಯೆ? ಅಮ್ಮನಿಗೂ ಗೋವಿಂದಣ್ಣನಿಗೂ ಮಾತ್ರ ಹೇಳುತ್ತೇನೆ. ಆದರೆ ಅವರು ಆ ಸಮಾಚಾರವನ್ನು ಬೇರೆ ಯಾರಿಗೂ ತಿಳಿಸದಂತೆ ಅವರಿಂದ ಮೊದಲು ಭಾಷೆ ತೆಗೆದುಕೊಳ್ಳುತ್ತೇನೆ."

"ಹಾಗಾದರೆ ಬೇಡ. ಲೀಲೆ, ನಿಮ್ಮೆಲ್ಲರನ್ನೂ ಬಿಟ್ಟು, ನಾಳೆ ನಾನು ಮದರಾಸಿಗೆ ಹೋಗಬೇಕಲ್ಲವೇ? ಮಂಗಳೂರಲ್ಲಿ ಒಂದು 'ಲೊ ಕೊಲೇಜ'ನ್ನು ಸ್ಥಾಪಿಸಿದ್ದರೆ ನಷ್ಟವೇನಾಗುತಿತ್ತು? ನಾನು ಆಗಾಗ ಇಲ್ಲಿಗೆ ಬರಬಹುದಾಗಿತ್ತು. ಆದರೆ ಮದರಾಸಿಗೆ ನಾಳೆ ಹೋದರೆ ಇನ್ನು ಬರುವುದು ಬಹುಶಃ ಎಪ್ರಿಲ್ ತಿಂಗಳಲ್ಲಿ ಪರೀಕ್ಷೆ ಮುಗಿದ ಮೇಲೆ! ಈ ಎಂಟು ಹತ್ತು ತಿಂಗಳನ್ನು ಹೇಗೆ ಕಳೆಯಲೆಂದು ಯೋಚಿಸುತಿದ್ದೇನೆ."

"ಆ ಯೋಚನೆಯನ್ನೆಲ್ಲ ಸದ್ಯಕ್ಕೆ ಬಿಟ್ಟುಬಿಡು. ಈಗ ನಿನ್ನ ಶುಭ ಸಮಾಚಾರವನ್ನು ತಿಳಿಸು. ನಾನು ಯಾರೊಡನೆಯೂ ಹೇಳುವುದಿಲ್ಲವೆಂದು ದೇವಸಾಕ್ಷಿಯಾಗಿ, ಈ ಭೂಮಿತಾಯಿ ಸಾಕ್ಷಿಯಾಗಿ ಹೇಳುತ್ತೇನೆ."

"ಹಾಗಾದರೆ ನನಗೆ ವಧು ನಿಶ್ಚಯವಾಗಿದೆ."

"ಒಳ್ಳೇದು. ಬಂತು ನಮಗೊಂದು ಗೌಜಿ! ನಾನು ಉಡುಪಿಯನ್ನು ಬಿಟ್ಟು ಹೊರಗೆ ಹೋಗದೆ ಎಷ್ಟೊ ವರ್ಷಗಳಾದುವು. ಈ ಮದುವೆಯ ನೆಪದಿಂದ ಊರೂರು ತಿರುಗಿ ಬರಬೇಕು."

"ನಿನ್ನ ಆ ಆಶೆಯು ವ್ಯರ್ಥ; ಏಕೆಂದರೆ ಹುಡುಗಿಯು ಉಡುಪಿಯವಳೇ; ಆದುದರಿಂದ ಮದುವೆಯಾಗುವುದೂ ಇಲ್ಲೇ!"

"ಉಡುಪಿಯ ಹುಡುಗಿಯೆ? ಯಾರೆಂದು ಬೇಗ ಹೇಳು."

"ಅವಳನ್ನು ನೀನು ಚೆನ್ನಾಗಿ ಬಲ್ಲೆ."

"ಉಡುಪಿಯ ಹುಡುಗಿಯರನ್ನೆಲ್ಲಾ ನಾನು ಚೆನ್ನಾಗಿ ಬಲ್ಲೆ. ಯಾರೆಂದು ಹೇಳುವೆಯಾದರೆ ಹೇಳು."

"ನೀನೇ ಹೇಳು."

"............ಹಾಂ, ಸಾವಿತ್ರಿಯಾಗಿರಬೇಕು."

"ಸಾವಿತ್ರಿಯೆ! ಸರಿ ಸರಿ. ನನ್ನನ್ನು ಮದುವೆಯಾಗಬೇಕೆಂದು ಅವಳೊಡನೆ ಕೇಳಿದೆ. ಅದಕ್ಕವಳು ಏನೆಂದಳು ಬಲ್ಲೆಯಾ? 'ನೀನು ಸತ್ಯವಾನನೆ? ನಿನ್ನ ವಲ್ಕಲವೆಲ್ಲಿ? ನಿನ್ನ ದಂಡ ಕಮಂಡಲಗಳೆಲ್ಲಿ? ನಿನ್ನ ತಪೋವನವೆಲ್ಲಿ? ಇನ್ನೊಂದು ವರ್ಷದಲ್ಲಿ ನಿನ್ನ ಆಯುಸ್ಸು ಮುಗಿಯುವುದೆ?' ಎಂದಳು. ಈಕೆಯ ಸಂಸರ್ಗವೇ ಬೇಡವೆಂದು ಓಡಿ ಬಂದೆ."

"ನಿನ್ನ ವಿನೋದ ಸಾಕು. ನಾನು ಹೇಳಿದುದು ಅಶ್ವಪತಿಯ ಮಗಳು ಸಾವಿತ್ರಿಯ ಸುದ್ದಿಯಲ್ಲ. ವೆಂಕಟ್ರಾಯರ ಮಗಳು ಸಾವಿತ್ರಿ!"

"ಯಾವ ವೆಂಕಟ್ರಾಯರು?"

"ಸಾಹುಕಾರ್ ವೆಂಕಟ್ರಾಯರು. ನಮ್ಮ ಮನೆಯ ಇದಿರಲ್ಲೆ

ಉಪ್ಪರಿಗೆಯ ದೊಡ್ಡ ಹೊಸಮನೆಯಿದೆಯಲ್ಲ! ಅದು ಅವರದು. ನಿನ್ನ ವಧು ಆ ಸಾವಿತ್ರಿಯಾಗಿರಬೇಕು."

"ಅವಳೇನು ಸುಂದರಿಯೆ?"

"ಅವಳು ಸುಂದರಿಯೇನೊ ಅಹುದು. ನೋಡಲಿಕ್ಕೆ ಪಿಂಗಾಣಿ ಗೊಂಬೆಯ ಹಾಗಿದ್ದಾಳೆ. ಆದರೆ...........ಆದರೆ........ ..."

"ಆದರೇನು?"

"ಆದರೆ ಕಲಿಯಲಿಕ್ಕೆ ಸ್ವಲ್ಪ 'ಬಡ್ಡು'. ಅವಳು ಶಾಲೆಬಿಟ್ಟು ಎರಡು ವರ್ಷವಾಯಿತು. ಮನೆಗೆಲಸವೆಲ್ಲವನ್ನೂ ಬಲ್ಲಳಂತೆ! ಅಲ್ಲದೆ ನೀನು ಕೇಳಿದಷ್ಟು ವರದಕ್ಷಿಣೆ ಕೊಡಲೂ ಅವರು ಶಕ್ತರು."

"ನನ್ನ ಭಾವೀಪತ್ನಿಯು ಆ ಸಾವಿತ್ರಿಯೆಂದು ನಿನಗಾರು ಹೇಳಿದರು?"

"ನನಗಾರು ಹೇಳಬೇಕು? ನನಗೆ ಕಣ್ಣುಕಿವಿಗಳಿಲ್ಲವೆ? ವೆಂಕಟ್ರಾಯರ ಹೆಂಡತಿಯು ನಮ್ಮ ಮನೆಗೆ ಬಂದಿದ್ದಳು. ತನ್ನ ಸಾವಿತ್ರಿಗೆ ಬೇಗನೆ ಮದುವೆಯಾಗಬೇಕೆಂದು ಹೇಳಿ, ಕಡೆಗೆ ನಿನ್ನ ವಿಷಯವೆಲ್ಲವನ್ನೂ ಅಮ್ಮನೊಡನೆ ಕೇಳಿದಳು. ಅಲ್ಲದೆ ವೆಂಕಟ್ರಾಯರು ನಿನ್ನ ತಂದೆಯ ಹಿಂದೆಮುಂದೆ ತಿರುಗುತ್ತಿರುವರಾಗಿಯೂ ಕೇಳಿದ್ದೇನೆ. ದೊಡ್ಡವರು ಯಾವ ಕೆಲಸವನ್ನಾದರೂ ಮಾಡಲು ಟೊಂಕಕಟ್ಟಿದರೆ, ಅದು ಸಾಧ್ಯವಾಗದೆ ಹೋದೀತೆ?"

"ನನ್ನ ಭಾವೀ ಪತ್ನಿಯು ಸಾವಿತ್ರಿಯಲ್ಲ. ನಿನಗಿನ್ನೊಂದು ಸೂಚನೆ ಕೊಡುತ್ತೇನೆ. ಅವಳು ಇಲ್ಲೆ ಇರುವಳು."

ಲೀಲೆಯ ಮುಖವು ಲಜ್ಜೆಯಿಂದ ಕೆಂಪೇರಿತು. "ನನ್ನನ್ನು ಓಡಿಸಬೇಕೆಂದು ನೀನು ಈ ಯುಕ್ತಿ ಹೂಡಿರಬಹುದು. ಸ್ಪಷ್ಟವಾಗಿ ಹೋಗ ಹೇಳಿದರೆ ನಾನಾಗಿ ಹೋಗುವುದಿಲ್ಲವೆ? ಹೀಗೆ ನನ್ನನ್ನು ಅಪಹಾಸ್ಯಗೊಳಿಸಿ, 'ಹೋಗಬೇಡ, ಹೊಗೆ ಹಾಕುತ್ತೇನೆ' ಎಂಬ ಗಾದೆಯಂತೆ ನೀನು

ವರ್ತಿಸುವುದೇಕೆ? ಈ ದಿನ ನಾನು ತಿರುಗಾಡಲು ಬರುವುದಿಲ್ಲವೆಂದು ಮೊದಲೆ ಹೇಳಿದ್ದೆ. ನೀನೇ ಒತ್ತಾಯದಿಂದ ಕರೆತಂದೆ. ಈಗ ನನ್ನ ಸಹವಾಸವು ನಿನಗೆ ಬೇಡವಾಗಿರಬಹುದು. ಅದೇ ನನ್ನನ್ನು ಓಡಿಸಬೇಕೆಂದು ಪ್ರಯತ್ನಿಸುತ್ತಿರುವೆ. ಇಗೊ ನಾನು ಹೊರಟೆ. ಇನ್ನು ಮುಂದೆ ಎಂದೆಂದಿಗೂ ನಿನ್ನೊಂದಿಗೆ ತಿರುಗಾಡಲು ಬರುವುದಿಲ್ಲ" ಎಂದು ಹೇಳಿ ಲೀಲೆಯು ಹಿಂದಿರುಗಿದಳು.

ಅನಂತನು ಅವಳನ್ನು ಹಿಂದೆ ಬರಹೇಳಿದ. ತಮ್ಮ ಪ್ರಣಯದ ಸಂಗತಿಯು ಲೀಲೆಗೆ ಈಗ ತಿಳಿಯಬಾರದೆಂದು ಸೀತೆಯ ಅಭಿಪ್ರಾಯವಿದ್ದಿತು. ಆದುದರಿಂದ ಲೀಲೆಯು ಹೊರಟುಹೋಗುವುದೆ ಅವಳಿಗೆ ಸಂತೋಷದಾಯಕವಾಗಿದ್ದಿತು. ಲೀಲೆಯನ್ನು ಸುಮ್ಮನೆ ಹೋಗಗೊಡಬೇಕೆಂದು ಅವಳು ಅನಂತನೊಡನೆ ಬೇಡಿಕೊಂಡಳು. ಆದರೆ ಅವನು ಅವಳ ಮಾತಿಗೆ ಕಿವಿಗೊಡದೆ, ಲೀಲೆಯ ಹಿಂದೆಯೆ ಹೋಗಿ, ಕೈ ಹಿಡಿದು ಅವಳನ್ನು ಕರೆತಂದು, "ಸೀತೆ, ಇವಳಿಗೆ ಯಾವಾಗಲೂ ಮದುವೆಯದೊಂದೇ ಚಿಂತೆ! ಇಲ್ಲಿ ನಮ್ಮಲ್ಲಿ ಯಾರು ಇವಳ ವಿವಾಹದ ಪ್ರಸ್ತಾಪವೆತ್ತಿದೆವೆಂದು ಇವಳು ಕೋಪಗೊಂಡು ಹೋಗಿದ್ದಳು! ಯಾರೇನನ್ನು ಮಾತಾಡಿದರೂ, ಇವಳು ತನಗೇ ಹಚ್ಚಿಕೊಳ್ಳುತ್ತಾಳೆ. ಲೀಲೆ, ನನ್ನ ವಧುವು ನೀನೆಂದು ತಿಳಿದುಕೊಂಡೆಯಾ?"

"ಸಾಕು, ನಿನ್ನ ಹುಡುಗಾಟ. ಆ ಹುಡುಗಿಯು ಇಲ್ಲೆ ಇರುವಳೆಂದು ಹೇಳಿದೆ. ಇಲ್ಲಿ ಬೇರೆ ಯಾರಿದ್ದಾರೆ? ಇಗೋ, ಈ ಇಡೀ ರಸ್ತೆಯಲ್ಲಿ ಸಾವು ಮೂವರಲ್ಲದೆ ಬೇರಾರೂ ಇಲ್ಲ. ನಿನಗೆ ಬೇರೆ ಯಾರಾದರೂ ತೋರುವರೆ? ಅಕ್ಕಾ, ನಿನಗೆ ನಾನಲ್ಲದೆ ಬೇರಾವ ಹುಡುಗಿಯೂ ಇಲ್ಲಿರುವಂತೆ ಅನುಭವವಾಗುತ್ತಿದೆಯೆ?"

ಸೀತೆಯು ಲಜ್ಜೆಯಿಂದ ತಲೆತಗ್ಗಿಸಿಕೊಂಡು, ಕಡೆಗಣ್ಣಿನಿಂದ ಅನಂತನನ್ನೆ ನೋಡತೊಡಗಿದಳು.

ಅನಂತನು "ಲೀಲೆ, ಇಲ್ಲಿ ನೋಡು. ಇಷ್ಟು ದೊಡ್ಡ ಹುಡುಗಿ ನಿನ್ನ ಕಣ್ಣಿಗೆ ಗೋಚರಿಸಲಿಲ್ಲವೆ! ಬೇಗನೆ ಡಾಕ್ಟರರಿಂದ ಕಣ್ಣು ಪರೀಕ್ಷೆ ಮಾಡಿಸಿ ಕನ್ನಡಕ ತೆಗೆದುಕೊ. 'ಸೀತೆ'ಯೆಂಬ ಹೆಸರನ್ನು ಧರಿಸಿರುವ ಈ ಹುಡುಗಿಯೆ ನನ್ನ ಭಾವೀಪತ್ನಿ!" ಎಂದ.

ಲೀಲೆಯು ದಿಙ್ಮೂಢಳಾಗಿ, ಸೀತೆಯನ್ನೂ ಅನಂತನನ್ನೂ ಟಕಮಕ ನೋಡತೊಡಗಿದಳು. ಸ್ವಲ್ಪ ಹೊತ್ತಿನ ಮೇಲೆ, "ಅಕ್ಕಾ, ಭಾವಯ್ಯನು ಹೇಳುವುದು ನಿಜವೆ?" ಎಂದು ಕೇಳಿದಳು.

ಪ್ರತ್ಯುತ್ತರ ಕೊಡುವ ಬದಲು ಸೀತೆಯು ಲಜ್ಜೆಯಿಂದ "ಲೀಲೆ, ಅವರು ಹೇಳುವುದು ನಿಜವೇದಾದರೆ ನಿನ್ನ ಸಮ್ಮತಿಯಿಲ್ಲವೆ?" ಎಂದು ಪ್ರಶ್ನಿಸಿದಳು.

"ಅಕ್ಕಾ, ನನ್ನ ಸಮ್ಮತಿಯೆ! ನನಗಾಗುವ ಸಂತೋಷವು ಅಷ್ಟಿಷ್ಟಲ್ಲ! ಅಕ್ಕಾ, ನೀವು ಈ ನಿರ್ಧಾರಕ್ಕೆ ಬಂದು ಎಷ್ಟು ದಿನಗಳಾದುವು?"

ಅನಂತನು ನಡುವೆ ಬಾಯಿ ಹಾಕಿ, "ಎಷ್ಟು ದಿನಗಳಾದುವೆಂದು ತಿಳಿಯುವುದರಿಂದ ನಿನಗೆ ಸಿಗುವ ಲಾಭವೇನು? ಅದೊಂದು ದಿನ ನಿನ್ನನ್ನು ನಮ್ಮ ಮನೆಗೆ ಓಡಿಸಿದುದು ನೆನಪಿದೆಯೆ? ನಾನು ಹಾಗೆ ಮಾಡಿದುದು ಸೀತೆಯೊಡನೆ ಏಕಾಂತವಾಗಿ ಮಾತನಾಡಬೇಕೆಂಬ ಉದ್ದೇಶದಿಂದಲೆ ಎಂದು ಹೇಳಿದರೆ ನೀನು ನಂಬುವೆಯಾ?" ಎಂದ.

ನಂಬದೆ ಏನು? ಅಕ್ಕಾ, ಇಷ್ಟು ದಿನವೂ ಈ ಶುಭಸಮಾಚಾರವನ್ನು ನನಗೆ ತಿಳಿಸದೆ ಗುಟ್ಟಾಗಿಟ್ಟುಕೊಂಡೆಯಾ? ಇನ್ನು ನಾನು ನಿನ್ನನ್ನು ನಂಬಲಾರೆ. ಇದರ ಹಿಂದೆ ನೀನು ಎಂತಹ ರಹಸ್ಯವನ್ನಾದರೂ ನನ್ನಿಂದ ಬಚ್ಚಿಟ್ಟುಕೊಂಡುದಿಲ್ಲ."

-ಸೀತೆಯು ಕಂಬನಿದುಂಬಿ, ಲೀಲೆಯ ಕೈಹಿಡಿದುಕೊಂಡು, "ಲೀಲೆ, ಇನ್ನೊಂದು ರಹಸ್ಯವನ್ನು ನಿನ್ನಿಂದ ಬಚ್ಚಿಟ್ಟುಕೊಂಡಿದ್ದೇನೆ. ಅದು ನನಗೊಬ್ಬಳಿಗಲ್ಲದೆ ಬೇರಾರಿಗೂ ಗೊತ್ತಿಲ್ಲ. ಅದನ್ನು ಈಗ ನಿಮಗೆ ತಿಳಿಸಿ,

ನನ್ನ ಹಿಂದಿನ ವರ್ತನೆಗಾಗಿ ಕ್ಷಮೆ ಬೇಡುತ್ತೇನೆ. ಲೀಲೆ, ನಮ್ಮ ಪ್ರಣಯ ವಿಚಾರವು ನಿನಗೆ ಈಗ ತಿಳಿದುಬಂದಿರುವುದಾದರೂ, ಅದು ಹುಟ್ಟಿ ಒಂದೆರಡು ತಿಂಗಳಾಯಿತು. ಇವರು ಮದರಾಸಿನಿಂದ ಬಂದ ಕ್ಷಣವೆ ಅದು ಅಂಕುರಿಸಿತು. ಆದರೆ ನನ್ನ ಪ್ರೇಮವನ್ನು ನಾನು ಮೊನ್ನೆವರೆಗೆ ವ್ಯಕ್ತಗೊಳಿಸಲಿಲ್ಲ. ಇವರನ್ನು ನಾನು ಪ್ರೀತಿಸುವೆನಾದರೂ, ಇವರು ನಿನ್ನನ್ನು ವರಿಸುತಿದ್ದರೆ ನನಗೆ ಹೆಚ್ಚಿನ ಸಂತೋಷವಾಗುತಿತ್ತು. ಅದಕ್ಕೋಸ್ಕರವೆ ಅವರು ನಿನ್ನನ್ನು ಪ್ರೀತಿಸುವಂತಾಗಲೆಂದು ನನ್ನಿಂದಾದಷ್ಟು ಪ್ರಯತ್ನ ನಡೆಸಿದೆ. ನಾನು ಮುಂಗೋಪಿಯೆಂದೂ ನಿನ್ನನ್ನು ಪೀಡಿಸುವುದೆಂದರೆ ನನಗಿಷ್ಟವೆಂದೂ ನನ್ನ ಕಣ್ಣಲ್ಲಿ ನೆತ್ತರಿಲ್ಲವೆಂದೂ ಇವರು ಅಭಿಪ್ರಾಯ ಪಡುವಂತಾಗಲೆಂದು ನಿನ್ನನ್ನು ಚಿತ್ರಹಿಂಸೆಗೆ ಗುರಿಮಾಡಿದೆ; ಅಲ್ಪ ಕಾರಣಕ್ಕಾಗಿ ಕೋಪ ಪ್ರದರ್ಶಿಸಿದೆ. ಇದರಿಂದ ಇವರಿಗೆ ನನ್ನಲ್ಲಿ ತಾತ್ಸಾರ ವುಂಟಾಗಬಹುದಾಗಿ ಭಾವಿಸಿದ್ದೆ. ಇಷ್ಟು ಸಾಲದೆ, ನಾನು ಗೋವಿಂದ ಮಾಸ್ಟರರಲ್ಲಿ ಅನುರಕ್ತೆಯಾಗಿರುವೆನೆಂದು ಇವರು ತಿಳಿಯಲೆಂಬ ಉದ್ದೇಶ ದಿಂದ ಎರಡು ಸಾಯಂಕಾಲ ನಾನೊಬ್ಬಳೆ ಅವರೊಡನೆ ತಿರುಗಾಡಲೂ ಹೋದೆ. ಇವರ ಅಸೂಯಾಗ್ನಿಯು ಪ್ರಜ್ವಲಿಸಿ, ಇವರು ನನ್ನ ಮೇಲೆ ಕೋಪತಾಳಿ, ನನ್ನ ಹಿಂಸೆಯನ್ನನುಭವಿಸುವ ನಿನ್ನ ಮೇಲಿನ ದಯೆಯಿಂದ ನಿನ್ನ ಸಹವಾಸವನ್ನು ಕೋರಿ, ಕೊನೆಗೆ ನಿಮ್ಮಿಬ್ಬರಲ್ಲೂ ಪ್ರಣಯವುಂಟಾಗಿ ವಿವಾಹವೂ ನೆರವೇರಲೆಂಬ ಉದ್ದೇಶದಿಂದ ನಾನು ಆ ರೀತಿ ಆಚರಿಸಿದೆ. ಆದರೆ ನಾನೆಣಿಸಿದಂತೆ ಒಂದೂ ನಡೆಯಲಿಲ್ಲ. ಇವರಿಗೆ ನನ್ನ ಮೇಲೆ ಕೋಪ ತಿರಸ್ಕಾರಗಳಾಗುವ ಬದಲು, ಇವರ ಮನಸ್ಸು ಬಹಳ ನೊಂದಂತೆ ತೋರಿತು. ಇವರ ಮನಸ್ಸನ್ನು ನೋಯಿಸಲು ನನ್ನಿಂದಾಗಲಿಲ್ಲ. ದೈವ ಲೀಲೆಯ ಮುಂದೆ ನನ್ನ ತಂತ್ರವು ನಡೆಯದೆಂಬುದಾಗಿ ತೋರಲು, ದೈವ ಚಿತ್ತಕ್ಕೆ ತಲೆತಗ್ಗಿಸಿದೆ. ಅಂದು ಅಬಕಾರಿ ಮೈದಾನಿನಲ್ಲಿ ಇವರು ನನ್ನ ಮುಂದೆ ಹೃದಯ ಬಿಚ್ಚಿ ತೋರಿಸಿದರು. ಇವರ ಮನಸ್ಸನ್ನು ತಿರುಗಿಸಲು ನಾನು ಬಗೆಬಗೆಯ ಯತ್ನ ಮಾಡಿದರೂ, ಏನೂ ಫಲವಿಲ್ಲದೆ ಹೋಯಿತು. ಕಡೆಗೆ ನಾನು ಗತ್ಯಂತರವಿಲ್ಲದೆ ವಿವಾಹಕ್ಕೊಪ್ಪಿದೆ.

"ಲೀಲೆ, ನನ್ನಂತಹ ವಿಧವೆಗೂ ಪ್ರೇಮವೆಂಬುದಿದೆಯೆ ಎಂದು ನೀನು ಕೇಳಬಹುದು. ಒಂದು ವೇಳೆ ನೀನು ಕೇಳದಿದ್ದರೂ, ಜಗತ್ತು ಕೇಳಿಯೇ ಕೇಳುವುದು; ಸನಾತನಿಗಳು ಕೇಳುವರು; ಸ್ವಾಮಿರಾಯರು ಕೇಳುವರು; ಅಂಧಾಚಾರದಲ್ಲಿ ಧರ್ಮವನ್ನು ಕಾಣುತ್ತಿರುವ ವೃದ್ಧ ನಾರಿಯರು ಕೇಳುವರು ಎಲ್ಲರಿಗೂ ನಾನು ಕೊಡುವ ಉತ್ತರವಿದೊಂದೇ—'ನಾನು ಎಲ್ಲರಂತೆ ಮನುಷ್ಯ ಮಾತ್ರಳು. ಎಲ್ಲರಂತೆ ನನಗೂ ದೇವರು ಒಂದು ಮೆದುಳನ್ನೂ ಒಂದು ಹೃದಯವನ್ನೂ ಕೊಟ್ಟಿರುವುದರಿಂದ ನನಗೆ ವಿಚಾರ ಶಕ್ತಿಯೂ ಅನುರಾಗವೂ ಇರುವುವು. ನಾನು ಅನುರಾಗವಿರಹಿತಳಾಗಬೇಕಾದರೆ, ನನ್ನ ಹೃತ್ಕ್ರಿಯೆಯೂ ನಿಂತುಬಿಡಬೇಕು. ನನ್ನ ಮನಸ್ಸಿಗೆ ಯುಕ್ತಕಂಡಂತೆ ನಾನು ನಡೆಯುವೆನು. ನನ್ನ ವರ್ತನೆಯು ಸಮಾಜಕ್ಕೆ ಸರಿದೋರದಿದ್ದರೆ, ಅದು ವಿಧಿಸುವ ಶಿಕ್ಷೆಯನ್ನು ಅನುಭವಿಸಲು ನಾನು ಸದಾ ಸಿದ್ಧಳು.' ಲೀಲೆ, ಇಷ್ಟು ದಿನ ನಿನ್ನನ್ನು ಹಿಂಸಿಸಿ, ನಿನ್ನಿಂದ ಈ ರಹಸ್ಯವನ್ನು ಬಚ್ಚಿಟ್ಟುಕೊಂಡಿದ್ದುದಕ್ಕೆ ನನ್ನ ಮೇಲೆ ಕೋಪಗೊಳ್ಳದೆ, ಕ್ಷಮಿಸುವೆಯಷ್ಟೆ! ನಿನ್ನ ಭಾವಯ್ಯನವರೂ ನನ್ನ ಮುಂದಿದ್ದ ಘನೋದ್ದೇಶವನ್ನು ಮನಸ್ಸಿಗೆ ತಂದುಕೊಂಡು, ನನ್ನನ್ನು ಕುಟಿಲೆಯೆಂದು ತಿರಸ್ಕರಿಸದೆ, ಅವರಿಗೆ ವೃಥಾ ವ್ಯಥೆಕೊಟ್ಟುದಕ್ಕಾಗಿ ನನ್ನ ತಪ್ಪನ್ನು ಮನ್ನಿಸುವರಾಗಿ ನಂಬುತ್ತೇನೆ" ಎಂದಳು.

ಸೀತೆಯ ಹಿಂದಿನ ವಿಚಿತ್ರವರ್ತನೆಯ ಅರ್ಥವು ಅನಂತನಿಗೆ ಈಗ ಗೋಚರವಾಗಿ, ಅವಳಲ್ಲಿದ್ದ ಅನುರಾಗವು ದ್ವಿಗುಣಿತವಾಯಿತು. ಇಂತಹ ಸ್ತ್ರೀಯು ತನ್ನನ್ನು ವರಿಸಲೊಪ್ಪಿದುದಕ್ಕಾಗಿ, ತನ್ನ ಅದೃಷ್ಟವನ್ನು ಕೊಂಡಾಡಿದ.

ಲೀಲೆಯು "ಭಾವಯ್ಯಾ, ನೀನು ಎರಡು ವಿಧದಿಂದ ಭಾವಯ್ಯನಾದೆ. ಇನ್ನು ನಿನ್ನನ್ನೇನೆಂದು ಕರೆಯಲಿ? 'ಭಾವಯ್ಯ, ಭಾವಯ್ಯ'ನೆಂದು ಕರೆಯಲೆ? 'ಭಾವಯ್ಯ ಸ್ಕ್ವೇರ್' ಎಂದು ಕರೆಯಲೆ?" ಎಂದು ಕೇಳಿದಳು.

"ಲೀಲೆ, ಗುಲಾಬಿಹೂವನ್ನು ಯಾವ ಹೆಸರಿನಿಂದ ಕರೆದರೂ, ಅದರ ಪರಿಮಳವು ಕಡಿಮೆಯಾಗುವುದೆ? ಅಂತೆಯೆ ನೀನು ನನ್ನನ್ನು ಯಾವ ಹೆಸರಿನಿಂದ ಕರೆದರೂ, ನಿನ್ನ ಮೇಲಿರುವ ನನ್ನ ಪ್ರೀತಿಯು ಕಡಿಮೆ ಯಾಗದು."

"ಅಷ್ಟುದೂರ ನಿಂತಿರೇಕೆ? ನೀವು ಒಟ್ಟಿಗೆ ನಿಂತುದನ್ನು ಕಣ್ತಣಿಯೆ ನೋಡಬೇಕೆಂದು ನನಗಾಸೆ."

"ಲೀಲೆ, ಅದೆಲ್ಲಾ ಇಲ್ಲಿ ರಸ್ತೆಯಲ್ಲೆ ಈಗಲೆ ಆಗಬೇಕೆ?" ಸೀತೆಯು ಪ್ರಶ್ನಿಸಿದಳು.

"ಅಕ್ಕಾ, ರಸ್ತೆಯಾದರೇನಾಯಿತು? ಈ ರಸ್ತೆಯಲ್ಲಿ ಯಾರೂ ಇಲ್ಲ. ಹತ್ತಿರ ಮನೆಗಳೂ ಇಲ್ಲ. ಎರಡೂ ಕಡೆ ಗದ್ದೆಗಳು. ಅಲ್ಲದೆ ಕತ್ತಲಾಗುತ್ತ ಬಂದಿರುವುದು."

ಅನಂತನು ಸೀತೆಯ ಪಕ್ಕದಲ್ಲಿ ನಿಂತು, "ಲೀಲೆ ನಮ್ಮನ್ನು ನೋಡಿ ತೃಪ್ತಿಯಾಯಿತೆ? ಇನ್ನು ಮನೆಗೆ ಹೋದಮೇಲೆ ನಮಗೆ ಯಾರದಾವರೂ ದೃಷ್ಟಿಯು ಬಾಧಕ ಬಾರದಂತೆ ಏನಾದರೂ ಮಂತ್ರತಂತ್ರ ಮಾಡಿಸಬೇಕು. ತಿಳಿಯಿತೆ? ಕತ್ತಲಾಯಿತು. ಇನ್ನು ಹಿಂದಿರುಗೋಣ. ಸೀತೆ, ಸಾಧ್ಯವಿದ್ದರೆ ಸಪ್ಟಂಬರ್ ಅಥವಾ ದಶಂಬರ್ ರಜೆಯ ಸಮಯ ಇಲ್ಲಿಗೆ ಬಂದು ಬಿಡುತ್ತೇನೆ."

"ಒಂದು ವರ್ಷದ ಮಟ್ಟಿಗೆ ಮನೆಯ ಹಂಬಲನ್ನು ಬಿಡಬಾರದೆ?"

ಮನೆಯ ಹಂಬಲ ನನಗಿಲ್ಲ, ಸೀತೆ. ಆದರೆ ನಿನ್ನನ್ನು ಬಿಟ್ಟಿರುವುದು ಹೇಗೆ?"

"ಹಾಗಾದರೆ ಇಲ್ಲೆ ಇರೋಣ. ಕೊಲೇಜನ್ನು ಬಿಟ್ಟುಬಿಡಿ."

"ಹಾಗಲ್ಲ, ಸೀತೆ. ನೀನು ಪ್ರತಿವಾರವೂ ಪತ್ರ ಬರೆಯುವೆಯಾದರೆ ವಿರಹತಾಪವು ಕೊಂಚ ಕಡಿಮೆಯಾದೀತು. ಇಲ್ಲವಾದರೆ ನನ್ನ ಮನಸ್ಸಿಗೆ

ಸಮಾಧಾನವಿಲ್ಲದೆ ಓದಲಿಕ್ಕೇ ಸಾಧ್ಯವಿಲ್ಲದಂತಾದೀತು. ಪತ್ರಬರೆಯುವ ಕೃಪೆ ಮಾಡಲಾರೆಯಾ, ಸೀತೆ?"

ಅನಂತನ ಪ್ರತಿ ಪತ್ರಕ್ಕೂ ಉತ್ತರ ಬರೆಯುವುದಾಗಿ ಸೀತೆಯು ಒಪ್ಪಿಕೊಂಡಳು.

ಅನಂತನು ಅವರೊಂದಿಗೆ ಮನೆ ಸೇರಿ, ಚಂದ್ರಭಾಗಮ್ಮನಿಗೆ ಪ್ರಣಾಮ ಮಾಡಿ, "ಅತ್ತೆ, ಮದರಾಸಿಗೆ ಹೋಗಿ ಬರುತ್ತೇನೆ" ಎಂದ.

ಅವಳು ಅವನನ್ನೆತ್ತಿ, "ಮಗೂ ಈ ವರ್ಷವೂ ನೀನು ಉಚ್ಚ ವರ್ಗದಲ್ಲಿ ಪಾಸಾಗುವಂತೆ ದೇವರು ಕರುಣಿಸಲಿ" ಎಂದು ಆಶೀರ್ವದಿಸಿದಳು.

ಸೀತೆಯನ್ನು ಬಿಟ್ಟುಹೋಗಲಿಕ್ಕೆ ಅನಂತನಿಗೆ ಮನಸ್ಸೆ ಬಾರದು. ಆದರೆ ನಿರ್ವಾಹವಿರದ್ದರಿಂದ, ಕಾಲೆಳೆಯುತ್ತ, ನಿಟ್ಟುಸಿರಿಡುತ್ತ ಹೋದ. ಸೀತೆಯು ಆತನು ಕಣ್ಮರೆಯಾಗುವ ವರೆಗೂ ನಿಂತು ನೋಡುತ್ತ, ಒಳಗೆ ತನ್ನ ಕೋಣೆಗೆ ಹೋಗಿ, ನಿಶ್ಶಬ್ದವಾಗಿ ಅಶ್ರುವರ್ಷವನ್ನು ಸುರಿಸತೊಡಗಿದಳು.

---

## ೧೫

ಮದರಾಸಿಗೆ ಹೋದ ಮೇಲೆ ಸುಮಾರು ಒಂದು ತಿಂಗಳ ವರೆಗೆ ಅನಂತನು ಸೀತೆಗೆ ಪತ್ರ ಬರೆಯಲಿಲ್ಲ. ಅವನ ಈ ವಿಚಿತ್ರವರ್ತನೆಗೆ ಕಾರಣವಿದು:— ಅನಂತನು ಉಡುಪಿಯಿಂದ ಹೊರಡುವಾಗ, ಹೋಗಿ ಬರುತ್ತೇನೆಂದು ಕಾವೇರಮ್ಮನೊಡನೆ ಹೇಳಿದ. ಅವಳು ಕಣ್ಣಲ್ಲಿ ನೀರು ತಂದುಕೊಂಡು, "ಮಗೂ, ನಿನ್ನ ಮಾತೆಗೆ ವ್ಯಥೆಯಾಗುವುದನ್ನರಿಯೆಯಾ? ವಿಧವೆಯಾದ ಆ ಸೀತೆಯನ್ನು ನನಗೋಸುಗ ಮರೆಯಲು ಪ್ರಯತ್ನಿಸು. ನೀನು ಪ್ರಯತ್ನಿಸಿದರೆ, ದೇವರು ನಿನ್ನ ಸಹಾಯಕ್ಕೆ ಬಂದು, ಈ ಕಠಿನಪ್ರಸಂಗ

ದಿಂದ ನಮ್ಮನ್ನು ಪಾರುಮಾಡಬಹುದು" ಎಂದು ಹೇಳಿದ್ದಳು. ಸೀತೆಯನ್ನು ಮರೆಯುವುದು ಅಸಾಧ್ಯವೆಂದು ಅನಂತನಿಗೆ ಗೊತ್ತಿದ್ದರೂ ಮಾತೆಯ ಕಂಬನಿಯಿಂದ ಅವನ ಮನಸ್ಸು ತಲ್ಲಣಗೊಳ್ಳಲು, ಸೀತೆಯನ್ನು ಮರೆಯಲು ತನ್ನಿಂದಾದಷ್ಟು ಪ್ರಯತ್ನಿಸುವೆನೆಂಬುದಾಗಿ ಮಾತೆಯ ಕಾಲುಮುಟ್ಟಿ ಹೇಳಿದ್ದ.

ಕೊಟ್ಟ ಮಾತಿಗೆ ವಿರೋಧವಾಗಿ ವರ್ತಿಸುವುದು ಅನಂತನಿಗೆ ಸರಿಬೀಳಲಿಲ್ಲ. ಸೀತೆಯನ್ನು ಮರೆಯಲು ಅವನು ಪ್ರಯತ್ನಿಸತೊಡಗಿದ. ಪ್ರೇಮಪ್ರವಾಹವು ಉಕ್ಕಿ ಬಂದಾಗ ಸೀತೆಗೆ ಪತ್ರ ಬರೆವನು; ಅರ್ಧದಲ್ಲೆ ಮಾತೆಗೆ ಕೊಟ್ಟ ವಚನವು ನೆನಪಾಗಲು ಪತ್ರವನ್ನು ಚೂರು ಚೂರು ಮಾಡುವನು. ಸಿತ್ಯವೂ ಸಾಯಂಕಾಲ ಸಮುದ್ರತೀರಕ್ಕೆ ಹೋಗಿ, ಹಿಂದೆ ತನ್ನ ಮನವನ್ನಪಹರಿಸಿದ್ದ ಆ ಸಹೋದರಿಯರನ್ನು ನೋಡುವನು. ಈಗ ಅವರು ಅವನ ಕಣ್ಣಿಗೆ ಸುಂದರಿಯರಾಗಿ ಗೋಚರಿಸರು; ಬಣ್ಣಬಳಿದ ಪ್ರತಿಮೆಗಳಂತೆ ತೋರುವರು! ಸೀತೆಯ ನೆನಪಾಗಲು ಅಲ್ಲಿಂದೆದ್ದು ಸಿನೆಮಕ್ಕೆ ಹೋಗುವನು. ರೂಪಲಾವಣ್ಯಗಳಿಗೆ ಹೆಸರಾದ ನಟಿಯರು ಸೀತೆಯಷ್ಟು ಸುಂದರಿಯರಾಗಿ ಅವನಿಗೆ ತೋರದಾದರು.

ಸೀತೆಯನ್ನು ಮರೆಯುವುದು ತನ್ನಿಂದಾಗದ ಕೆಲಸವೆಂದು ಅವಸಿಗೆ ತಿಳಿದುಬಂತು. ತನ್ನ ಮನಸ್ಸು ಗಟ್ಟಿಯಾಗಿಲ್ಲದಿದ್ದುದಕ್ಕಾಗಿ ದುಃಖಿಸಿ, ತನ್ನನ್ನು ಕ್ಷಮಿಸಬೇಕೆಂಬುದಾಗಿ ಮನಸ್ಸಿನಲ್ಲೆ ಮಾತೆಯನ್ನು ಪ್ರಾರ್ಥಿಸಿ, ಸೀತೆಗೆ ಉದ್ದವಾದ ಪತ್ರ ಬರೆದು ಕಳುಹಿಸಿ, ಪ್ರತ್ಯುತ್ತರವನ್ನು ನಿರೀಕ್ಷಿಸತೊಡಗಿದ.

ಕ್ಲಪ್ತಕಾಲಕ್ಕೆ ಸೀತೆಯ ಪ್ರತ್ಯುತ್ತರ ಬಂತು. ಅದರಲ್ಲಿದುದು ಎರಡೆ ಸಾಲುಗಳು. ಕಾಗದ ಬಂದು ತಲಪಿತೆಂದೂ ತಾವೆಲ್ಲರೂ ಸೌಖ್ಯವಾಗಿದ್ದೇವೆಂದೂ ಮಾತ್ರ ಇದ್ದಿತು. ಒಂದು ಗಳಿಗೆಯಲ್ಲಿ ಅನಂತನು ಆ ಪತ್ರವನ್ನು ನೂರು ಸಾರಿ ಓದಿದ. ಮುತ್ತಿನಂತಹ ಅಕ್ಷರಗಳನ್ನು ನೋಡಿ ನೋಡಿ ಹಿರಿಹಿರಿ ಹಿಗ್ಗಿದ.

ಅಂದಿನಿಂದ ಪ್ರತಿವಾರವೂ ಅನಂತ-ಸೀತೆಯರ ಪತ್ರವ್ಯವಹಾರವು ಬೆಳೆಯತೊಡಗಿತು. ಸೀತೆಯ ಪ್ರತ್ಯುತ್ತರ ಬರುವ ದಿನ ಅನಂತನು ಅಂಚೆಯವನ ಬರವನ್ನು ಆತುರದಿಂದ ಕಾಯತೊಡಗಿದ. ಸಮುದ್ರತೀರಕ್ಕೂ ಸಿನೆಮಕ್ಕೂ ಹೋಗುವುದನ್ನು ಬಿಟ್ಟೇ ಬಿಟ್ಟ. ಬೇಸರವಾದಾಗಲೆಲ್ಲ ಸೀತೆಯ ಮೂರ್ತಿಯನ್ನು ಧ್ಯಾನಿಸುತಿದ್ದ; ಇಲ್ಲವಾದರೆ ಆಕೆಯ ಪತ್ರಗಳನ್ನು ತೆಗೆದೋದುತಿದ್ದ.

---

## ೧೬

ಸೀತೆಯನ್ನು ಅನಂತನು ಮರೆಯಲಿಲ್ಲವೆಂಬುದು ಅವನ ಪತ್ರಗಳಿಂದಾಗಿ ಕಾವೇರಮ್ಮನಿಗೆ ಗೊತ್ತಾಯಿತು. ಅವನು ಆಕೆಗೆ ಬರೆಯುತಿದ್ದ ಪತ್ರಗಳಲ್ಲೆಲ್ಲಾ ಸೀತೆಯ ವಿಚಾರವೆ ತುಂಬಿದ್ದಿತು. ಅವನನ್ನು ಸರಿ ದಾರಿಗೆ ತರುವುದು ಅಸಾಧ್ಯವೆಂಬುದಾಗಿ ಆಕೆಗೆ ತೋರಿತು. ಆದರೂ ಕೊನೆಯ ಪ್ರಯತ್ನ ಮಾಡಬೇಕೆಂಬುದಾಗಿ ನಿರ್ಧರಿಸಿ, ಸೀತೆಯು ತನ್ನ ಮನೆಗೆ ಬರಬೇಕೆಂಬುದಾಗಿ ಹೇಳಿ ಕಳುಹಿಸಿದಳು.

ಲೀಲೆಯು ಎಲ್ಲಾದರೊಮ್ಮೊಮ್ಮೆ ಕಾವೇರಮ್ಮನ ಮನೆಗೆ ಹೋಗುತಿದ್ದಳು; ಆದರೆ ಸೀತೆಯು ಮಾತ್ರ ಹೋಗುತ್ತಿರಲಿಲ್ಲ. ಕಾವೇರಮ್ಮನು ತನ್ನನ್ನು ಬರಹೇಳಲು ಕಾರಣವೇನೆಂಬುದಾಗಿ ಸೀತೆಯು ಯೋಚಿಸತೊಡಗಿದಳು. ಯಾವ ಕಾರಣವೂ ಆಕೆಗೆ ತೋಚಲಿಲ್ಲ. ಅಂದು ಸಾಯಂಕಾಲ ಆಕೆಯು ಕಾವೇರಮ್ಮನ ಮನೆಗೆ ಹೋದಳು.

ಗೋಪಾಲರಾಯರು ಮನೆಯಲ್ಲಿರಲಿಲ್ಲ. ಕಾವೇರಮ್ಮನು ಸೀತೆಯನ್ನು ಒಳಗೆ ಕರೆದುಕೊಂಡು ಹೋದಳು. ಕಾವೇರಮ್ಮನಿಗೂ ಅನಂತನಿಗೂ ಹಿಂದೆ ನಡೆದ ವಿವಾದದ ವಿವರವು ಸೀತೆಗೆ ತಿಳಿದಿರಲಿಲ್ಲ; ಆದರೂ, ತನ್ನ ವಿಷಯವಾಗಿ ಕಾವೇರಮ್ಮನಿಗೆ ಕೊಂಚ ಅಸಮಾಧಾನವಿದೆಯೆಂಬುದಾಗಿ ಅವಳಿಗೆ ಗೊತ್ತಿದ್ದಿತು.

ಕಾವೇರಮ್ಮನ ಮುಖವು ದೀನಮುದ್ರೆ ತಾಳಿತ್ತು. ಸೀತೆಯನ್ನು ಆಕೆಯು ಬಳಿಯಲ್ಲಿ ಕುಳ್ಳಿರಿಸಿ, ಪ್ರೀತಿಯಿಂದ ಮೈದಡವಿ, "ಅಮ್ಮಾ, ಸೀತೆ, ನಮ್ಮ ಅನಂತನು ನಿನ್ನನ್ನು ವರಿಸಬೇಕೆಂದು ಹಟಹಿಡಿದಿರುವನು. ನಿನ್ನನ್ನು ವರಿಸಿದರೆ ಅವನಿಗೆ ಶ್ರೇಯಸ್ಸಾಗಬಹುದೆಂಬುದಾಗಿ ನೀನು ಭಾವಿಸುವೆಯಾ?" ಎಂದು ಕೇಳಿದಳು.

"ಅತ್ತೆ, ಈ ವಿಷಯ ಏನು ಹೇಳಲೂ ನಾನು ಶಕ್ತಳಲ್ಲ. ನನ್ನನ್ನು ಇಲ್ಲಿಗೆ ಬರಹೇಳಿದುದೇಕೆಂದು ತಿಳಿಸಲಾರಿರಾ?"

"ಈ ವಿಷಯವಾಗಿಯೆ ನಿನ್ನೊಡನೆ ಮಾತಾಡಬೇಕೆಂದು ನಿನ್ನನ್ನು ಕರೆಸಿಕೊಂಡೆ. ಮಗೂ, ಅವನು ನಿನ್ನನ್ನು ಮದುವೆಯಾದರೆ ಅವನ ಭವಿಷ್ಯವು ಮಣ್ಣುಗೂಡುವುದು! ಮಾತ್ರವಲ್ಲದೆ ನಮ್ಮ ಏಕಮಾತ್ರಪುತ್ರನಾದ ಅವನು ಬಹಿಷ್ಕೃತನಾದರೆ, ನಮಗೆ ಈ ವೃದ್ಧಾಪ್ಯದಲ್ಲಿ ಪುತ್ರರಿಲ್ಲದಂತಾಗಿ, ಸತ್ತ ಮೇಲೆ ನಮಗೆ ಸದ್ಗತಿ ದೊರೆಯಲಿಕ್ಕಿಲ್ಲ. ಸೀತೆ, ನಿನ್ನ ಮೇಲಿರುವ ಅವನ ಮೋಹವನ್ನು ಅವನು ಮರೆಯುವಂತೆ ಮಾಡಲು ಸಾಧ್ಯವಿಲ್ಲವೆ? ನೀನು ಪ್ರಯತ್ನಿಸಿದರೆ ನಿನ್ನಿಂದ ಅದು ಖಂಡಿತ ಸಾಧ್ಯವಿದೆ. ಅವನನ್ನು ನೀನು ವರಿಸಲಾರೆಯೆಂದು ಬರೆದರೆ, ಅವನು ಈ ಹುಚ್ಚನ್ನು ಬಿಡುವನು."

"ಅತ್ತೆ, ನಾನು ಹಾಗೆ ಬರೆದ ಮಾತ್ರಕ್ಕೆ ನಿಮ್ಮ ಕಾರ್ಯಸಾಧನೆಯಾಗುವುದೆಂದು ನಿಮಗೆ ತೋರುವುದೆ? ಅವನನ್ನು ವಿವಿಧ ರೀತಿಯಿಂದ ನಾನು ಪರೀಕ್ಷಿಸಿ ನೋಡಿರುವೆನು. ಅವನ ಪ್ರೇಮವು ದೃಢವಾದುದು. ನಾನು ಅವನನ್ನು ವರಿಸುವುದಿಲ್ಲವೆಂದು ತಿಳಿಸಿದರೆ, ಅವನಿಗೆ ಜೀವಿತದಲ್ಲಿ ಜುಗುಪ್ಸೆಯುಂಟಾಗಿ, ಅವನು ಹಿಂದೆ ಮುಂದೆ ನೋಡದೆ ಏನನ್ನಾದರೂ ಮಾಡಿಕೊಳ್ಳಬಹುದು! ಆದುದರಿಂದ ಅವನ ಮನಸ್ಸನ್ನು ತಿರುಗಿಸಲು ಇನ್ನೂ ಪ್ರಯತ್ನಮಾಡಿರಿ. ನನ್ನಿಂದಾಗುವ ಸಹಾಯ ನೀಡಲು ನಾನು ಸದಾ ಸಿದ್ಧಳು. ನೀವು ಹೇಳುವಂತೆ ಮಾಡಿದರೆ ಒಳ್ಳೆಯದಾಗಲಿಕ್ಕಿಲ್ಲವೆಂಬ ಭಯವು ನನಗದೇಕೊ ಉಂಟಾಗಿರುವುದು."

"ಸೀತೆ, ನಮ್ಮ ಅನಂತನನ್ನು ನಾನು ನಿನಗಿಂತ ಚೆನ್ನಾಗಿ ಬಲ್ಲೆ. ಮೊದಲಿನಿಂದಲೂ ಅವನದು ಸ್ವಲ್ಪ ಹಠಸ್ವಭಾವ. ಆದರೆ ಅವನ ಛಲವು ಸಾಧಿಸದೆಂದು ತೋರಿದ ಕೂಡಲೆ ಅವನು ಎಲ್ಲವನ್ನೂ ಮರೆತುಬಿಡು ವನು. ಎಫ್. ಎ. ಮುಗಿದ ಕೂಡಲೆ, ಇನ್ನು ವಿದ್ಯಾಭ್ಯಾಸವನ್ನು ನಿಲ್ಲಿಸುವೆ ನೆಂದ. ಆದರೆ ಅವನು ಬಿ. ಎ. ಆಗಿ ವಕಾಲತಿಗೆ ಹೋಗಬೇಕೆಂದು ಅವನ ತಂದೆಯವರು ಹೇಳಲು, ಮರುಮಾತಾಡದೆ ಬಿ. ಎ. ಕಲಿಯಲು ಪ್ರಾರಂಭಿ ಸಿದ. ಅವನ ತಂದೆಯವರು ಈಗಿನ ಸಂದರ್ಭದಲ್ಲಿ ನನ್ನ ಕಡೆ ನಿಂತು ಒಂದು ಮಾತು ಹೇಳಿದ್ದರೆ, ಇಷ್ಟೆಲ್ಲಾ ಕಷ್ಟಪಡುವ ಅಗತ್ಯವಿರಲಿಲ್ಲ. ಆದರೆ ಈ ವಿಷಯದಲ್ಲಿ ಅವರು ಅವನ ಅಭಿಪ್ರಾಯವನ್ನು ಸಮರ್ಥಿಸಿ, ಅವನ ಹುಚ್ಚನ್ನು ಹೆಚ್ಚಿಸಿರುವರು. ಸೀತೆ, ನೀನಲ್ಲದೆ ಬೇರಾರೂ ಈ ಕಠಿನ ಪ್ರಸಂಗದಿಂದ ನಮ್ಮನ್ನು ಪಾರುಮಾಡಲಾರರು. ಅನಂತನನ್ನು ನೀನು ಮದುವೆಯಾಗುವುದಿಲ್ಲವೆಂದು ಪತ್ರಬರೆದು ಕಳುಹಿಸಿದೆಯಾದರೆ ನಾವು ನಿನಗೆ ತುಂಬಾ ಕೃತಜ್ಞರಾಗಿರುತ್ತೇವೆ. ಅನಂತನ ಶ್ರೇಯಸ್ಸನ್ನು ನಾವೂ ಕೋರುವವರಲ್ಲವೆ? ಆದುದರಿಂದ, ಅಮ್ಮಾ ಸೀತೆ, ನಮ್ಮೆಲ್ಲರ ಮೇಲೆ ಕೃಪೆದೋರಿ, ನಾನೆಂದಂತೆ ಮಾಡಲಾರೆಯಾ? ಅನಂತನನ್ನು ಬಿಟ್ಟುಬಿಡುವು ದೆಂದರೆ ನೀನು ಎಂತಹ ಸ್ವಾರ್ಥತ್ಯಾಗ ಮಾಡಬೇಕಾಗುವುದೆಂಬುದನ್ನು ನಾನು ಬಲ್ಲೆ. ಆದರೂ ಅವನ ಹಿತಕ್ಕಾಗಿ ನೀನು ಹಾಗೆ ಮಾಡಲಾರೆಯಾ?"

ಸೀತೆಯು ಯೋಚನೆಗೊಳಗಾದಳು. ಅವಳು ಎಷ್ಟೋ ಹೊತ್ತು ಸುಮ್ಮನೆ ಕುಳಿತು ಕಣ್ಣೀರು ಸುರಿಸಿದಳು. ಅನಂತನನ್ನು ತಾನು ಬಿಡ ಬೇಕಾಗುವುದಲ್ಲಾ ಎಂಬ ಯೋಚನೆಯು ಅವಳನ್ನೆಂದೂ ಬಾಧಿಸಲಿಲ್ಲ. ಆದರೆ ಕಾವೇರಮ್ಮನೆಂದಂತೆ ತಾನು ಮಾಡಿದುದಾದರೆ, ಅನಂತನಿಗೆ ಶ್ರೇಯ ಸ್ಸಾಗುವುದರ ಬದಲು ಕೆಡುಕಾಗಬಹುದೆಂಬ ಹೆದರಿಕೆಯು ಅವಳನ್ನು ಬಿಡಲಿಲ್ಲ.

ಕಾವೇರಮ್ಮನು, "ಸೀತೆ, ನಮ್ಮ ಮೇಲೆ ದಯೆಯಿಲ್ಲವೆ? ಏನೆಂದು ನಿರ್ಧರಿಸಿದೆ?" ಎಂದು ಕೇಳಿದಳು.

“ಅತ್ತೆ, ನನಗೇಕೊ ಭಯವಾಗುತ್ತಿದೆ. ನಾನು ಅನಂತನ ಹಂಬಲನ್ನು ಬಿಟ್ಟುಬಿಟ್ಟರೆ, ಅವನು ನನ್ನನ್ನು ಮರೆತು ಸುಖಿಯಾಗುವನೆಂದು ನೀವು ನಿಶ್ಚಯವಾಗಿಯೂ ಬಲ್ಲಿರಾ?”

“ಮಗೂ, ಈ ವಿಷಯದಲ್ಲಿ ನೀನೇನೂ ಯೋಚಿಸಬೇಕಾಗಿಲ್ಲ. ಒಂದೆರಡು ದಿನ ಅವನು ಸ್ವಲ್ಪ ದುಃಖಿಸಬಹುದು. ‘ಹಾಗೆ ಮಾಡುವೆನು’ ‘ಹೀಗೆ ಮಾಡುವೆನು’ ಎಂದು ಹೇಳಿ ಹೆದರಿಸಬಹುದು. ಆದರೆ ಕಾಲ ಕ್ರಮೇಣ ಅವನು ಎಲ್ಲವನ್ನೂ ಮರೆಯುವನು. ಇನ್ನಾದರೂ ನಿನ್ನ ಸಂಶಯವು ನಿವಾರಣೆಯಾಯಿತೆ?”

“ಅತ್ತೆ, ಹಾಗಾದರೆ ನೀವು ಹೇಳಿದಂತೆ ಮಾಡುವೆನೆಂದು ನಿಮ್ಮ ಪಾದಸಾಕ್ಷಿಯಾಗಿ ಹೇಳುತ್ತೇನೆ. ವಿಧವೆಯಾದ ನನಗಿನ್ನೇಕೆ ಸುಖದ ಆಶೆ! ಅನಂತನು ಸುಖಿಯಾಗಿದ್ದರೆ, ನನಗದೇ ಸುಖ. ನಾಳೆಯೆ ಪತ್ರ ಬರೆಯುತ್ತೇನೆ. ನಾನು ಇನ್ನೇನು ಮಾಡಬೇಕು?”

“ನೀನು ಅನಂತನನ್ನು ಎಂದೆಂದಿಗೂ ವರಿಸುವುದಿಲ್ಲವೆಂದು ನನಗೆ ಮಾತು ಕೊಡಬೇಕು.”

“ಕಾವೇರತ್ತೆ, ಎದೆಯನ್ನು ಕಲ್ಲಿಗಿಂತಲೂ ಗಟ್ಟಿಮಾಡಿ ನಿಮಗೆ ಮಾತು ಕೊಡುತ್ತೇನೆ. ನಾನೆಂದಿಗೂ ಅನಂತನನ್ನು ಮದುವೆಯಾಗೆನು. ಇನ್ನು ನಾನು ಹೋಗಿಬರಲೆ? ಪತ್ರಬರೆದು ನಾಳೆ ಬೆಳಗ್ಗೆ ತರುತ್ತೇನೆ. ನೀವು ಓದಿ, ಒಪ್ಪಿದರೆ ಮಾತ್ರ ಟಪ್ಪಾಲಿಗೆ ಹಾಕುವೆನು.”

ಕಾವೇರಮ್ಮನ ಕಂಗಳಿಂದ ನೀರು ಧಾರೆ ಧಾರೆಯಾಗಿ ಸುರಿಯತೊಡಗಿತು. ಇಂತಹ ಸ್ವಾರ್ಥತ್ಯಾಗಿಯನ್ನು ತಾನು ಈ ಹಿಂದೆ ಕಂಡಾಬಟ್ಟೆ ಬಯ್ದುದಕ್ಕಾಗಿ ಅವಳು ಬಹಳ ವಿಷಾದಿಸಿದಳು. ಇವಳು ವಿಧವೆಯಾಗಿರದೆ, ಕನ್ಯೆಯಾಗಿದ್ದು ತನ್ನ ಸೊಸೆಯಾಗಿದ್ದರೆ ಎಷ್ಟು ಯೋಗ್ಯವಾಗಿತ್ತೆಂದು ಅವಳು ಚಿಂತಿಸಿದಳು. ಅನಂತನು ಇವಳಲ್ಲಿ ಅನುರಕ್ತನಾದುದರಲ್ಲಿ ಆಶ್ಚರ್ಯವೇನೂ ಇಲ್ಲವೆಂಬುದು ಅವಳಿಗೀಗ ತಿಳಿಯಿತು.

ಅವಳು ಸೀತೆಯನ್ನು ತಕ್ಕೈಸಿ, "ಮಗಳೇ, ಪಾಪಿಯಾದ ನನ್ನನ್ನು ಕ್ಷಮಿಸಲಾರೆಯಾ? ನಿನ್ನ ವಿಷಯದಲ್ಲಿ ನಾನು ಮಾಡಿದ ಎಷ್ಟೊ ಅಪರಾಧ ಗಳಿವೆ. ನನ್ನನ್ನು ಕ್ಷಮಿಸು." ಎಂದು ಅಂಗಲಾಚಿ ಬೇಡಿಕೊಂಡಳು.

"ಇನ್ನು ನಿಶ್ಚಿಂತರಾಗಿ. ದೇವರು ನಿಮ್ಮಿಚ್ಛೆಯನ್ನು ಪೂರೈಸಲಿ" ಎಂದು ಹೇಳಿ ಸೀತೆಯು ಹೊರಟುಹೋದಳು.

---

## ೧೭

ಅಂದು ರಾತ್ರಿ ಸೀತೆಗೆ ಊಟ ಸೇರಲಿಲ್ಲ; ಆದರೂ ತಾಯಿಯ ಮನಸ್ಸನ್ನು ನೋಯಿಸಬಾರದೆಂದು ಹಾಗೂ ಹೀಗೂ ಊಟದ ಶಾಸ್ತ್ರವನ್ನವಳು ತೀರಿಸಿದಳು.

ಊಟವಾದ ಕೂಡಲೆ ಚಂದ್ರಭಾಗಮ್ಮನೂ ಲೀಲೆಯೂ ಲಕ್ಷ ದೀಪೋತ್ಸವಕ್ಕೆ ಹೊರಟರು. ಸೀತೆಯು ತಾನು ಉತ್ಸವಕ್ಕೆ ಬರುವುದಿಲ್ಲ ವೆಂಬುದಾಗಿ ಹೇಳಿ, ಅವರು ಹೋದ ಮೇಲೆ ಬಾಗಿಲನ್ನಿಕ್ಕಿ, ಓದುವ ಕೋಣೆಗೆ ಹೋದಳು. ಅವಳ ಕಂಗಳಲ್ಲಿ ನೀರು ತುಂಬಿತ್ತು. ಇಷ್ಟು ದಿನ ತನ್ನ ಹೃದಯಮಂದಿರದಲ್ಲಿ ಸ್ಥಾಪಿಸಿ, ಪೂಜಿಸುತ್ತಿದ್ದ ಮೂರ್ತಿಯನ್ನು ಇಂದವಳು ಕಿತ್ತೊಗೆಯತಕ್ಕವಳು! ಇಂತಹ ಕಷ್ಟಕರವಾದ ಕಾರ್ಯವನ್ನು ತಾನು ಹೇಗೆ ಸಾಧಿಸಲೆಂದು ಅವಳಿಗೆ ತೋರದಾಯಿತು. ಆದರೆ ಅದನ್ನು ಮಾಡದೆ ಗತ್ಯಂತರವಿರಲಿಲ್ಲ. ಅವಳಿಗೆ ಸ್ವಸುಖಕ್ಕಿಂತ ಅನಂತನ ಸುಖವೆ ಹೆಚ್ಚಿನದಾಗಿತ್ತು. ತನ್ನ ಈ ವರ್ತನೆಯಿಂದಾಗಿ ಅನಂತನು ಸುಖಿಯಾಗ ಬಹುದೆಂದು ಅವಳಿಗಿನ್ನೂ ತೋರದು. ಆದರೆ ಎಲ್ಲ ಜವಾಬ್ದಾರಿಯನ್ನೂ ಕಾವೇರಮ್ಮನು ಹೊತ್ತಿದ್ದಳು. ಈಗ ಸೀತೆಯ ಕರ್ತವ್ಯವೆಂದರೆ ಕಾವೇರಮ್ಮನಿಗಿತ್ತ ಮಾತಿನಂತೆ ವರ್ತಿಸುವುದು. ಅನಂತನಿಗೆ ಕೇಡುಕಾಗದಂತೆ ಕರುಣಿಸಬೇಕೆಂದು ಅವಳು ಭಕ್ತಿಪುರಸ್ಸರವಾಗಿ ಪ್ರಾರ್ಥಿಸಿದಳು. ಕಣ್ಣೀರಿ

ನೊಂದಿಗೆ ಅವಳ ಯೋಚನೆಯೂ ಮಾಯವಾಗಿ, ಒಂದು ವಿಧದ ಸಮಾಧಾನವಾಗಲು ಪತ್ರ ಬರೆಯಲುಪಕ್ರಮಿಸಿದಳು.

ಪತ್ರ ಮುಗಿಯುವಷ್ಟರಲ್ಲಿ ಚಂದ್ರಭಾಗಮ್ಮನೂ ಲೀಲೆಯೂ ಉತ್ಸವದಿಂದ ಹಿಂದಿರುಗಿದರು. ಸೀತೆಯು ಪತ್ರವನ್ನು ತೆಗೆದಿಟ್ಟು, ಕಣ್ಣೀರನ್ನೊರಸಿ, ನಗುಮೊಗದಿಂದ ಹೊರಗೆ ಬಂದು ಬಾಗಿಲನ್ನು ತೆರೆದಳು.

ಮರುದಿನ ಬೆಳಗ್ಗೆ ಸೀತೆಯು ಆ ಪತ್ರವನ್ನು ಹಿಡಿದುಕೊಂಡು ಕಾವೇರಮ್ಮನ ಮನೆಗೆ ಹೋದಳು.

ಕಾವೇರಮ್ಮನು ನಡುಗುವ ಕೈಗಳಿಂದ ಪತ್ರವನ್ನು ತೆರೆದು ಓದ ತೊಡಗಿದಳು.

'ಶ್ರೀ ಅನಂತರಾಯರಿಗೆ,

ಸೀತೆಯ ಸಮಸ್ಕಾರಗಳು. ಕ್ಷೇಮ ತರುವಾಯ—

ನಿನ್ನೆ ರಾತ್ರಿ ನಾನೊಂದು ಕನಸು ಕಂಡೆ. ನನ್ನ ಸ್ವಾಮಿಯು ಕನಸಿನಲ್ಲಿ ನನ್ನ ಬಳಿ ಬಂದು ನಿಂತರು. ಅವರ ಕಂಗಳಿಂದ ಒಂದೇ ಸವನೆ ನೀರು ಸುರಿಯುತಿದ್ದಿತು. ನಾನು ವ್ಯಾಕುಲಗೊಂಡು ಅವರ ದುಃಖದ ಕಾರಣವನ್ನು ವಿಚಾರಿಸಿದೆ. ಅವರು ನನ್ನನ್ನು ಕುರಿತು, 'ಸೀತೆ, ಈಗ ನೀನು ಪುನರ್ವಿವಾಹ ಮಾಡಿಕೊಳ್ಳಬೇಕೆಂಬುದಾಗಿ ನಿರ್ಧರಿಸಿರುವೆಯಷ್ಟೆ! ಇದು ಸಂತೋಷದ ಸಂಗತಿ. ಆದರೆ ನೀನು ಅನಂತನನ್ನು ವರಿಸುವುದು ಶ್ರೇಯಸ್ಕರವಲ್ಲ' ಎಂದು ಹೇಳಿದರು.

ನಾನು ಅಳತೊಡಗಿದೆ. ಅವರು ನನ್ನನ್ನು ಸಮಾಧಾನಗೊಳಿಸಿ, 'ಸೀತೆ, ಅನಂತನನ್ನು ಬಿಟ್ಟುಬಿಡುವುದೆಂದರೆ ನಿನಗೆ ಬಹಳ ಪ್ರಯಾಸವಾಗುವುದೆಂಬುದನ್ನು ನಾನು ಬಲ್ಲೆ. ಆದರೆ ನೀನು ಅವನನ್ನು ಮರೆಯಲೇ ಬೇಕು' ಎಂದರು.

ನಾನು ಅವರ ಪಾದಗಳನ್ನು ಹಿಡಿದು ಬೇಡಿಕೊಂಡೆ. ನನ್ನ ಸುಖ ಕ್ಕೋಸುಗ ನಾನು ವಿವಾಹವಾಗುವುದಲ್ಲವೆಂದೂ ನಾನು ನಿರಾಕರಿಸಿದರೆ ನಿಮಗೆ ತುಂಬಾ ವ್ಯಥೆಯೂಗುವುದೆಂದೂ ಈ ವಿವಾಹದಿಂದಾಗಿ ನನ ಗೆಂತಹ ಕಷ್ಟ ಬರುವುದಾದರೂ ಸಂತೋಷದಿಂದ ಅನುಭವಿಸುವೆನೆಂದೂ ಹೇಳಿಕೊಂಡೆ.

ಅವರಂದರು—'ಸೀತೆ, ಇದರಿಂದ ನಿನಗೇನೂ ಹಾನಿಯಾಗದು. ಆದರೆ ಅನಂತನಿನ್ನೂ ಅನುಭವವಿಲ್ಲದ ಯುವಕನು. ಅವನ ಭವಿಷ್ಯವು ಹಾಳಾಗುವುದು. ಅವನ ಜೀವನವು ಸದಾ ದುಃಖಮಯವಾಗುವುದು. ಕಷ್ಟಗಳು ಅವನನ್ನು ಎಲ್ಲೆಲ್ಲೂ ಹಿಂಬಾಲಿಸುವುವು. ಅನಂತನು ಸುಖಿ ಯಾಗಿರಬೇಕೆಂದು ನೀನು ಇಚ್ಛಿಸುವುದಿಲ್ಲವೆ?'

'ನನ್ನ ಪ್ರಾಣಹೋದರೂ ಚಿಂತೆಯಿಲ್ಲ; ಅನಂತನ ಕೂದಲು ಸಹ ಕೊಂಕಲಾಗದು!'

'ಹಾಗಾದರೆ ನೀನು ಅವನ ಹಂಬಲನ್ನು ಬಿಡಬೇಕು. ಕೂಡಲೆ ಅವನಿಗೊಂದು ಪತ್ರ ಬರೆದು ಎಲ್ಲ ಸಂಗತಿಯನ್ನೂ ತಿಳಿಸಬೇಕು'

'ನಾನು ಹೀಗೆ ಮಾಡಿದರೆ ಅವನು ಸುಖಿಯಾಗುವನೆ?'

'ಅದೆಲ್ಲಾ ನಿನಗೇಕೆ? ನಿನ್ನ ಕರ್ತವ್ಯವನ್ನು ಫಲಾಪೇಕ್ಷೆಯಿಲ್ಲದೆ ಮಾಡು. ಮುಂದೆ ಎಲ್ಲವೂ ಸುಗಮವಾಗುವುದು.'

ಅನಂತರಾಯರೇ, ಕೆಟ್ಟ ಕನಸಿನಂತೆ ನನ್ನನ್ನು ಮರೆತುಬಿಡಿ. ಯಃಕಶ್ಚಿತ ನನಗಾಗಿ ನೀವು ಕಷ್ಟದುಃಖಗಳಿಗೀಡಾಗಲು ನಾನೆಂದಿಗೂ ಸಮ್ಮತಿಸಲಾರೆ. ನನ್ನ ಸ್ವಾಮಿಯು ಹಿಂದೆ ಎಷ್ಟೋ ಸಂದರ್ಭಗಳಲ್ಲಿ ನನಗೆ ಕನಸಿನಲ್ಲಿ ಕಾಣಿಸಿಕೊಂಡು ಭವಿಷ್ಯ ಹೇಳಿರುವರು. ಇಷ್ಟರ ವರೆಗೆ ಅವರ ಪ್ರತಿ ಮಾತೂ ಅಕ್ಷರಶಃ ನಿಜವಾಗಿರುತ್ತದೆ. ಆದುದರಿಂದ ಈ ಸಂಗತಿಯಲ್ಲಿ ನನ್ನನ್ನು ಮನ್ನಿಸಬೇಕಾಗಿ ಬೇಡುತ್ತೇನೆ. ನಿಮ್ಮನ್ನು ತೊರೆ

ಯಲು ನನ್ನ ಹೃದಯಕ್ಕೆ ಎಷ್ಟು ವೇದನೆಯಾಗುತ್ತದೆಂದು ಹೇಳಲು ಸಾಧ್ಯವಿಲ್ಲ. ಆದರೂ, ನಿಮ್ಮನ್ನು ಬಿಡಲೇಬೇಕಾಗಿದೆ. ಆದುದರಿಂದ ನೀವು ನನ್ನನ್ನು ಮರೆತು, ಬೇರೆ ಯಾರನ್ನಾದರೂ ವಿವಾಹವಾಗಬೇಕೆಂದು ಆಗ್ರಹಪೂರ್ವಕವಾಗಿ ಬೇಡಿಕೊಳ್ಳುತ್ತೇನೆ. ಇನ್ನು ಮುಂದೆ ನಾನು ನಿಮಗೆ ಪತ್ರಬರೆಯಲಾರೆ. ನಿಮ್ಮ ವಿಚಾರದಲ್ಲಿ ನಾನು ಅರಿತೊ ಅರಿಯದೆಯೊ ಮಾಡಿರಬಹುದಾದ ಅಪರಾಧಗಳನ್ನು ಮನ್ನಿಸಬೇಕಾಗಿ ಪ್ರಾರ್ಥಿಸುತ್ತೇನೆ.

ಇತಿ

ಸೀತಾ.'

ಪತ್ರವಾಚನವಾದ ಮೇಲೆ ಕಾವೇರಮ್ಮನು ಕಂಬನಿದುಂಬಿ, ಸೀತೆಯನ್ನಪ್ಪಿ, "ಮಗಳೆ, ನಿನ್ನನ್ನು ತುಂಬಾ ನೋಯಿಸಿದೆ. ಈ ಪತ್ರದ ಪ್ರತಿಯೊಂದು ಅಕ್ಷರ ಬರೆಯುವಾಗಲೂ ನಿನ್ನ ಹೃದಯವನ್ನು ಇರಿದಂತಾಗಿರಬಹುದು! ಈ ಜನ್ಮದಲ್ಲಿ ನಿನಗೆ ಸಿಗದ ಸುಖವು ಇನ್ನು ಮುಂದಿನ ಜನ್ಮಗಳಲ್ಲಿ ಸಿಗುವಂತಾಗಲೆಂದು ಪರಮಾತ್ಮನೊಡನೆ ಪ್ರಾರ್ಥಿಸುವೆನು." ಎಂದು ಹೇಳಿ ಸೀತೆಯನ್ನು ಕಣ್ಣೀರಿಂದ ಮಿಾಯಿಸಿದಳು.

ಸೀತೆಯ ಕಣ್ಣಿಂದ ನೀರು ಬರುತ್ತಿರಲಿಲ್ಲ; ಏಕೆಂದರೆ, ಅವಳ ಕಣ್ಣಿಲ್ಲಿದ್ದ ನೀರಿನ ಬುಗ್ಗೆಗಳೆಲ್ಲವೂ ಬತ್ತಿಹೋಗಿದ್ದುವು! ಅವಳು ಆ ಪತ್ರವನ್ನು ಒಂದು ಲಕೋಟೆಯೊಳಗೆ ಹಾಕಿ, ಸ್ವಹಸ್ತದಿಂದಲೆ ವಿಳಾಸ ಬರೆದು, ಕಾವೇರಮ್ಮನ ಕೈಗಿತ್ತು, ಅವಳೇ ಟಪ್ಪಾಲಿಗೆ ಹಾಕಿಸಬೇಕೆಂಬುದಾಗಿ ತಿಳಿಸಿ, ಹೊರಟುಹೋದಳು.

---

## ೧೮

ಸೀತೆಯ ಪತ್ರವನ್ನು ಓದಿದ ಕೂಡಲೆ ಅನಂತನಿಗೆ ಸಿಡಿಲು ಬಡಿದಂತಾಯಿತು. ಮೊದಮೊದಲು ಅವನು ತನ್ನ ಕಣ್ಣುಗಳನ್ನೆ ನಂಬಲಿಲ್ಲ. ಕನಸು

ಕಾಣುತ್ತಿರುವೆನೊ ಎಂಬ ಭ್ರಾಂತಿಯೂ ಅವನಿಗುಂಟಾಯಿತು. ತಾನು ಎಚ್ಚರವಾಗಿದ್ದೇನೆಂದು ಖಚಿತವಾಗಲು, ಪುನಃ ಪುನಃ ಆ ಪತ್ರವನ್ನೋದಿದ. ಸೀತೆಗೆ ಹುಚ್ಚು ಹಿಡಿದಿರಬಹುದೆ?—ಎಂದು ಅವನಿಗೆ ಸಂಶಯವಾಯಿತು. ವಿಚಿತ್ರ ವರ್ತನೆಯಲ್ಲಿ ನಿಸ್ಸೀಮಳಾದ ಅವಳು, ತನ್ನನ್ನು ಪರೀಕ್ಷಿಸಲೆಂದು ಈ ಪತ್ರ ಬರೆದಿರಬೇಕೆಂದು ಅವನು ನಿರ್ಧರಿಸಿದ. ಸೀತೆಯಂತಹ ಸುಶಿಕ್ಷಿತೆಯು ಕನಸಿನಲ್ಲಿ ವಿಶ್ವಾಸವಿಟ್ಟಿರುವುದನ್ನು ನೋಡಿದರೆ ತನಗೆ ಆಶ್ಚರ್ಯವಾಗುವುದೆಂದೂ ತನ್ನ ಸುಖದುಃಖದ ವಿಚಾರವನ್ನು ನಿಶ್ಚಯಿಸಲು ತಾನು ಪರಿಪೂರ್ಣ ಅರ್ಹನಾಗಿರುವೆನೆಂದೂ ಸೀತೆಯ ಹೊರತು ಬೇರಾರನ್ನೂ ತಾನು ವಿವಾಹವಾಗುವುದಿಲ್ಲವೆಂದೂ ಅವಳು ಇಂತಹ ಯುಕ್ತಿಯಿಂದ ತನ್ನನ್ನು ಪರೀಕ್ಷಿಸುವುದಾದರೆ ತನ್ನ ಪ್ರೇಮವು ಇನ್ನೂ ಇನ್ನೂ ಪ್ರಬಲವಾಗುವುದೆ ವಿನಾ ದುರ್ಬಲವಾಗುವಂತಿಲ್ಲವೆಂದೂ ಉದ್ದವಾದ ಪತ್ರವೊಂದನ್ನು ಬರೆದು ಕಳುಹಿಸಿ, ಸೀತೆಯ ಉತ್ತರವು ಎಂದಿಗೆ ಬರುವುದೊ ಎಂದು ಕಾಯತೊಡಗಿದ.

ಒಂದು ವಾರವಾದರೂ ಸೀತೆಯ ಪತ್ರ ಬರಲಿಲ್ಲ. ತನ್ನ ಈ ಪತ್ರ ನೋಡಿದ ಕೂಡಲೆ ಪ್ರತ್ಯುತ್ತರ ಬರೆಯಬೇಕಾಗಿಯೂ ಅವಳು ಉತ್ತರ ಬರೆಯಲು ತಡಮಾಡಿದರೆ ತನ್ನ ಮನಸ್ಸಿಗೆ ವ್ಯಥೆಯಾಗುವುದಾಗಿಯೂ ಅನಂತನು ಇನ್ನೊಂದು ಪತ್ರ ಬರೆದ.

ಇದಕ್ಕೂ ಪ್ರತ್ಯುತ್ತರವಿಲ್ಲ. ಅನಂತನು ಕಾವೇರಮ್ಮನಿಗೆ ಕಳುಹಿಸಿದ ಪತ್ರದಲ್ಲಿ ತಾನು ಸೀತೆಗೆ ಎರಡು ಸಲ ಬರೆದರೂ ಪ್ರತ್ಯುತ್ತರವಿಲ್ಲದಿರುವುದರಿಂದ ಅವಳು ಊರಲ್ಲಿರುವಳೊ ಇಲ್ಲವೊ ಎಂಬುದು ತನಗೆ ತಿಳಿಯದು; ತನಗೆ ಅವಳು ಕೂಡಲೆ ಪತ್ರ ಬರೆಯುವಂತೆ ಹೇಳಬೇಕು; ಸೀತೆಯನ್ನು ಮರೆಯುವುದು ತನ್ನಿಂದಾಗದಮಾತು ಎಂಬುದಾಗಿ ಬರೆದ. ಕಾವೇರಮ್ಮನ ಪ್ರತ್ಯುತ್ತರದಲ್ಲಿ ಸೀತೆಯು ಸೌಖ್ಯವಾಗಿದ್ದಾಳೆಂದೂ ಅವನ ಪತ್ರಗಳು ಅವಳಿಗೆ ಸಿಕ್ಕಿವೆಯಾದರೂ ಅವಳು ವಿವಾಹಕ್ಕೆ ಸಿದ್ಧಳಿಲ್ಲದಿರುವುದರಿಂದ ಉತ್ತರ ಬರೆಯುವ ಗೋಜಿಗೆ ಹೋಗಲಿಲ್ಲವೆಂದೂ ಉಲ್ಲೇಖಿತವಾಗಿತ್ತು.

ಕೆಲವು ದಿನಗಳನ್ನು ಅನಂತನು ಹೇಗೆ ಕಳೆದನೊ ಪರಮಾತ್ಮನೆ ಬಲ್ಲ! ದಶಂಬರ ರಜೆ ಸಿಕ್ಕಿದ ಕೂಡಲೆ ಅವನು ನೇರವಾಗಿ ಉಡುಪಿಗೆ ಬಂದ.

ಅವನ ಖಿನ್ನವದನವನ್ನು ನೋಡಿ ಕಾವೇರಮ್ಮನಿಗೆ ಬಹಳ ದುಃಖ ವಾಯಿತು. ಅವಳು ಅವನನ್ನು ಪರಿಪರಿಯಾಗಿ ಸಮಾಧಾನಪಡಿಸಲು ಯತ್ನಿಸಿದಳು.

ಅವನು ಅವಳ ಪಾದದ ಮೇಲೆ ಮಸ್ತಕವನ್ನಿಟ್ಟು, "ಅಮ್ಮಾ, ಸೀತೆ ಯನ್ನು ನಾನು ಮರೆಯಲಾರೆ. ಅವಳನ್ನು ನಾನು ವರಿಸುವ ವಿಷಯದಲ್ಲಿ ನಿನ್ನ ಆಕ್ಷೇಪವಿದೆಯೆಂದು ನೀನು ಹೇಳಿರುವೆ. ಆದರೆ ನಾನು ಅವಳನ್ನು ಪ್ರೀತಿ ಸುವುದರಲ್ಲಿ, ಅವಳನ್ನು ಪೂಜಿಸುವುದರಲ್ಲಿ ನಿನ್ನ ಆಕ್ಷೇಪವೇನೂ ಇರಲಿ ಲಿಕ್ಕಿಲ್ಲವೆಂದು ಭಾವಿಸುತ್ತೇನೆ" ಎಂದು ಕಣ್ಣೀರಿಟ್ಟ.

ಎಷ್ಟೆಂದರೂ ಹೆತ್ತ ತಾಯಿಯ ಕರುಳಲ್ಲವೆ! ಪುತ್ರನ ದೈನ್ಯವನ್ನೂ ಅಚಲಪ್ರೇಮವನ್ನೂ ಕಂಡು ಅವಳ ಹೃದಯವು ಕರಗಿ ನೀರಾಯಿತು. ಅವಳು ಅವನನ್ನು ಪ್ರೇಮದಿಂದೆತ್ತಿ, ಆಲಿಂಗಿಸಿ, "ಮಗೂ, ನಿನ್ನನ್ನೆಷ್ಟೊ ದಣಿಸಿದೆ! ನಿನಗಿಷ್ಟವಿದ್ದಂತೆ ಮಾಡಪ್ಪಾ. ಮುಖ್ಯವಾಗಿ ನೀನು ಸುಖ ದಿಂದಿರಬೇಕೆಂದೆ ಅಲ್ಲವೆ ನಾನು ಬಯಸುವುದು? ಸೀತೆಯಂತಹ ಸ್ತ್ರೀಯು ನಿನಗೆ ದೊರಕಿರುವುದು ಪೂರ್ವಪುಣ್ಯದಿಂದ! ಇನ್ನು ನಾನೆಂದಿಗೂ ನಿನ್ನ ವಿವಾಹಕ್ಕೆ ಅಡ್ಡಿತಂದೊಡ್ಡೆ" ಎಂದಳು.

ಅನಂತನ ಮುಖವು ಕ್ಷಣಮಾತ್ರ ಸುಪ್ರಸನ್ನವಾಯಿತು. ಉತ್ತರ ಕ್ಷಣದಲ್ಲೆ ಅವನು ಕುಗ್ಗಿದ ದನಿಯಿಂದ, "ಅಮ್ಮಾ, ನಿನಗೆ ವ್ಯಥೆಯಾಗುವು ದಾದರೆ ಬೇಡ. ಚೆನ್ನಾಗಿ ಯೋಚಿಸಿ ನೋಡು" ಎಂದ.

"ಮಗೂ, ಇನ್ನು ಯೋಚಿಸುವುದೇನುಳಿದಿದೆ? ವಿಧವಾವಿವಾಹವು ನ್ಯಾಯಸಮ್ಮತವೆಂದು ನನ್ನ ಅಭಿಪ್ರಾಯ. ಆದರೆ ನಮಗದರ ಗೊಡವೆ ಯೇಕೆ? ಸಮಾಜವನ್ನು ನಾವು ಕೆಣಕಬೇಕೇಕೆ? ಬೇರೆಯವರು ಬೇಕಾದು

ದನ್ನು ಮಾಡಲಿ ಎಂಬುದಾಗಿ ಇಷ್ಟರ ವರೆಗೆ ನನ್ನಭಿಪ್ರಾಯವಿತ್ತು. ಆದರೆ ನೀನು ಇಷ್ಟು ಧೃಢಸಂಕಲ್ಪದವನಾಗಿರುವಾಗ ನಾನು ಸಂತೋಷಿಸದಿರುವುದು ಹೇಗೆ? ನಿನ್ನಂತಹ ವೀರಪುತ್ರನಿಗೆ ಜನ್ಮಕೊಟ್ಟ ನಾನೇ ಧನ್ಯೆ! ನೀನು ಸೀತೆಯನ್ನೆ ವರಿಸಬೇಕು. ನಿಮಗೆ ಶ್ರೇಯಸ್ಸಾಗಲೆಂದು ನಾನು ಹೃತ್ಪೂರ್ವಕವಾಗಿ ಆಶೀರ್ವದಿಸುತ್ತೇನೆ."

ಅನಂತನ ಸಂತೋಷಕ್ಕೆ ಪಾರವಿಲ್ಲವಾಯಿತು. ಸೀತೆಯ ನೆನಪಾಗಲು, "ಅಮ್ಮಾ, ಸೀತೆಯು ಸೌಖ್ಯವಾಗಿರುವಳೇ? ಲೀಲೆಯೂ ಅತ್ತೆಯೂ ಚೆನ್ನಾಗಿರುವರಷ್ಟೆ?" ಎಂದು ಕೇಳಿದ.

"ಸೀತೆಗೆ ಒಂದೆರಡು ದಿನಗಳಿಂದ ಶೀತವಂತೆ! ನಿನ್ನೆ ಸ್ವಲ್ಪ ಜ್ವರವೂ ಬಂದಿತ್ತಂತೆ. ಅವಳನ್ನು ನೋಡಲು ಹೋಗಬೇಕೆಂದಿದ್ದೆ. ಸಾಯಂಕಾಲ ಒಟ್ಟಿಗೆ ಹೋಗೋಣ."

ಅಂದು ಸಾಯಂಕಾಲ ಇಬ್ಬರೂ ಚಂದ್ರಭಾಗಮ್ಮನ ಮನೆಗೆ ಹೋದರು. ಭಾವಯ್ಯನನ್ನು ನೋಡಿ ಲೀಲೆಯು ಕುಣಿದಾಡಿ, ಒಳಗೋಡಿ, ಈ ಶುಭವಾರ್ತೆಯನ್ನು ಸೀತೆಗೆ ತಿಳಿಸಲು, ಸೀತೆಗೆ ಸಂತೋಷವಾಯಿತು. ಆದರೆ ಈಗ ಅನಂತನಿಗೂ ತನಗೂ ಯಾವ ಸಂಬಂಧವೂ ಇಲ್ಲವೆಂಬುದು ನೆನಪಾಗುತ್ತಲೆ ಅವಳು ನಿರ್ಲಿಪ್ತಳಂತೆ ಸುಮ್ಮನೆ ಮಲಗಿದಳು.

ಅನಂತನು ಒಳಗೆ ಬರಲು, ಸೀತೆಯು ಎದ್ದು ಕುಳಿತುಕೊಳ್ಳಲು ಹವಣಿಸಿದಳು. ಅವನು ಅವಳನ್ನು ಮಲಗಿರಲು ಹೇಳಿ, ಜ್ವರವು ಹೇಗಿದೆಯೆಂದು ವಿಚಾರಿಸಲು, ಸಂಪೂರ್ಣ ಬಿಟ್ಟುಹೋಗಿಲ್ಲವೆಂಬುದಾಗಿ ಸೀತೆಯು ತಿಳಿಸಿದಳು. ಅವಳ ಹಾಸಿಗೆಯ ಪಕ್ಕದಲ್ಲೆ ಅನಂತನು ಕುಳಿತು ಅವಳನ್ನೆ ಎವೆಯಿಕ್ಕದೆ ನೋಡತೊಡಗಿದ. ಅವಳು ಕಣ್ಮುಚ್ಚಿ ಸುಮ್ಮನಿದ್ದಳು.

"ಸೀತೆ, ನಮ್ಮ ವಿವಾಹಕ್ಕೆ ಅಮ್ಮನು ಸಮ್ಮತಿಯಿತ್ತಿರುವಳೆಂದು ತಿಳಿಸಲು ಸಂತೋಷಪಡುತ್ತೇನೆ. ನಿನ್ನ ಯೋಚನೆ ಬಿಟ್ಟುಬಿಡು. ಇನ್ನು ನಿನ್ನ ತಾಯಿಯ ಅನುಮತಿ ಪಡೆದು ವಿವಾಹದ ದಿನ ನಿಶ್ಚಯಿಸೋಣ."

"ನಾನು ಎಲ್ಲವನ್ನೂ ಬರೆದು ತಿಳಿಸಿದ್ದೇನೆ. ನನ್ನನ್ನು ಕ್ಷಮಿಸಬೇಕು. ನನ್ನನ್ನು ಮರೆತುಬಿಡುವ ಕೃಪೆಮಾಡಬೇಕು."

"ಸೀತೆ, ನಿನ್ನನ್ನು ಮರೆಯಬೇಕೆಂದು ಪ್ರೀತಿಸತೊಡಗಿದೆನೆ? ನಿನ್ನನ್ನು ತೊರೆಯಬೇಕೆಂದು ನನ್ನ ಹೃದಯಸಿಂಹಾಸನದಲ್ಲಿ ನಿನ್ನನ್ನು ಪ್ರತಿಷ್ಠಿಸಿದೆನೆ?"

"ನಿಮ್ಮೊಡನೆ ಚರ್ಚೆಮಾಡಲಾರೆ. ಎಲ್ಲವೂ ನನ್ನ ತಪ್ಪು. ನನ್ನ ತಪ್ಪಿಗಾಗಿ ನಿಮ್ಮೊಡನೆ ಎಷ್ಟು ಸಲ ಎಷ್ಟು ವಿಧವಾಗಿ ಕ್ಷಮೆ ಬೇಡಬೇಕಾದರೂ ನಾನು ಸಿದ್ಧಳಿದ್ದೇನೆ. ಆದರೆ ಅಲ್ಪಳಾದ ನನ್ನನ್ನು ಮರೆಯುವ ಕೃಪೆ ಮಾಡಬೇಕು. ಇದಿಷ್ಟೆ ನಿಮ್ಮಲ್ಲಿ ನಾನು ಸೆರಗೊಡ್ಡಿ ಬೇಡುತ್ತಿರುವುದು."

"ಸೀತೆ, ನನ್ನ ಸುಖದ ವಿಷಯ ವೃಥಾ ಯೋಚನೆಗೊಳಗಾಗುವೆಯೇಕೆ? ನನಗೆ ಯಾವುದು ಸುಖದಾಯಕವೆಂದು ತೋರುವುದೊ ಅದನ್ನೆ ನಾನು ಮಾಡುತ್ತಿರುವೆನು. ಪರಮಾತ್ಮನ ಧ್ಯಾನದಲ್ಲೆ ನಿರತನಾದ ಯೋಗಿಗೆ ಹೇಗೆ ಲೌಕಿಕ ಸುಖಗಳ ಹಂಬಲವಿಲ್ಲವೊ, ಹಾಗೆಯೆ ಒಂದು ತತ್ತ್ವಕ್ಕಾಗಿ ಹೆಣಗಲು ಟೊಂಕಕಟ್ಟಿದ ನನಗೆ, ಕಾರ್ಯಸಾಧನೆ ಮಾಡುವಾಗ ಸುಖಾಪೇಕ್ಷೆಯಿಲ್ಲ; ಮಾತ್ರವಲ್ಲ, ದೊರೆಯುವ ಕಷ್ಟಗಳು ಸುಖದಂತೆಯೆ ಸರಿ! ನನ್ನ ಕಾರ್ಯಸಾಧನೆಯ ಸುಖವೊಂದಲ್ಲದೆ ನನಗೆ ಬೇರಾವ ಸುಖವೂ ಬೇಡ. ಆದುದರಿಂದ ಸೀತೆ, ಇನ್ನಾದರೂ ನೀನು ಈ ಹಾಳು ಹಟ ಬಿಡು."

ಸೀತೆಯ ಬಾಯಿಯಿಂದ ಮಾತೇ ಹೊರಡಲಿಲ್ಲ. ಅವಳಿಗೆ ಉಭಯ ಸಂಕಟವಾಗಿತ್ತು. ಏನು ಮಾಡಲೆಂದು ತೋರದೆ ಅವಳು ಮೌನವಾಗಿ ಕಂಬನಿಗರೆಯತೊಡಗಿದಳು.

ಅಷ್ಟರಲ್ಲಿ ಕಾವೇರಮ್ಮನು ಲೀಲೆಯೊಂದಿಗೆ ಆ ಕೋಣೆಯನ್ನು ಪ್ರವೇಶಿಸಿದಳು.

ಅನಂತನು, "ಅಮ್ಮಾ, ಸೀತೆಯು ಯಾವುದೋ ಒಂದು ಕನಸಿನಲ್ಲಿ ನಂಬುಗೆಯಿಟ್ಟು ಈಗ ವಿವಾಹಕ್ಕೊಪ್ಪುವುದಿಲ್ಲ. ನೀನಾದರೂ ಹೇಳಿ ಅವಳು ಒಪ್ಪುವಂತೆ ಮಾಡಬಾರದೆ?" ಎಂದ.

ಕಾವೇರಮ್ಮನು ಸೀತೆಯು ಹಾಸಿಗೆಯ ಬಳಿ ಕುಳಿತು, ಅವಳ ಕೈ ಯನ್ನು ಹಿಡಿದುಕೊಂಡು, "ಅಮ್ಮಾ, ಸೀತೆ, ನಮ್ಮ ಅನಂತನ ಆಸೆಯನ್ನು ಈಡೇರಿಸಿ, ನಮ್ಮ ಮನೆಯನ್ನು ಬೆಳಗಲಾರೆಯಾ? ಹಿಂದೆ ನಡೆದುದೆಲ್ಲ ವನ್ನೂ ಮರೆತು ವಿವಾಹಕ್ಕೆ ಸಮ್ಮತಿಸು" ಎಂದಳು.

"ಅತ್ತೆ, ನೀವೂ ನನಗೆ ಈ ರೀತಿ ಉಪದೇಶಿಸುವಿರಾ? ಎಲ್ಲವನ್ನೂ ತಿಳಿದ ನೀವೂ ಹೀಗೆ ಹೇಳುತ್ತಿರುವಿರಾ?"

"ಸೀತೆ, ನಾನು ಹೇಳಿದುದರಿಂದಾಗಿ ನೀನು ಅಂದು ಪತ್ರ ಬರೆದೆ ಯೆಂಬುದು ಅನಂತನಿಗಿನ್ನೂ ತಿಳಿದಿಲ್ಲ. ನಿನ್ನ ಕನಸೆಂಬುದು ಸುಳ್ಳೆಂದೂ ಇದೆಲ್ಲಾ ಅನಂತನ ಮನಸ್ಸನ್ನು ತಿರುಗಿಸಲು ನೀನು ಹೂಡಿದ ಯುಕ್ತಿ ಯೆಂದೂ ನಮ್ಮಿಬ್ಬರಿಗೇ ಗೊತ್ತು. ಅನಂತನನ್ನು ಮದುವೆಯಾಗುವುದಿಲ್ಲ ವೆಂಬುದಾಗಿ ನೀನು ನನಗಿತ್ತ ಭಾಷೆಗೆ ವ್ಯತಿರಿಕ್ತವಾಗಿ ಹೇಗೆ ನಡೆಯಲೆಂದು ಚಿಂತಿಸಬೇಡ. ನೀನು ಕೇವಲ ನಿನ್ನ ಸುಖಕ್ಕೋಸುಗ ವಿವಾಹವಾಗುವು ದಲ್ಲವೆಂಬುದು ನನಗೂ ನಿನಗೂ ತಿಳಿದಿದೆ. ಒಂದು ಆದರ್ಶವನ್ನು ಸಾಧಿ ಸಲು ವಚನಭ್ರಷ್ಟಳಾದರೆ ಪಾಪವಿಲ್ಲ. ಒಂದು ವೇಳೆ ಪಾಪವಿದ್ದರೆ, ಎಲ್ಲ ಪಾಪವೂ ನನ್ನ ಪಾಲಿಗಿರಲಿ!"

"ಅತ್ತೆ, ನಾನು ಇವರನ್ನು ಒಂದೆರಡು ಸಲವಲ್ಲ, ಎಷ್ಟೋ ಸಲ ಮೋಸಗೊಳಿಸಿರುವೆನು. ನನ್ನಷ್ಟು ಕುಟಿಲೆಯು ಯಾರೂ ಇಲ್ಲವೆಂದು ಇವರು ಅಭಿಪ್ರಾಯಪಟ್ಟಿರಬಹುದು."

ಅನಂತನಿಗೆ ಎಲ್ಲವೂ ತಿಳಿಯಿತು. ಸೀತೆಯ ನಿಸ್ವಾರ್ಥಬುದ್ಧಿಯ ಪರಮಾವಧಿಯ ಅರಿವು ಅವನಿಗುಂಟಾಗಿ ಅವಳ ವಿಷಯವಾಗಿ ಒಂದು

ವಿಧದ ಪೂಜ್ಯ ಭಾವನೆಯು ಜಾಗೃತವಾಯಿತು. ಈ ದೇವಿಯಿದಿರಲ್ಲಿ ತಾನೊಬ್ಬ ಹುಲುಮನುಜನೆಂದು ಭಾಸವಾಗಲು, ಕೈಮುಗಿದು ಕುಳಿತ.

ಕಾವೇರಮ್ಮನು, "ಸೀತೆ, ನಿನ್ನನ್ನು ಬಲ್ಲ ಯಾರೂ ನಿನ್ನನ್ನು ಕುಟಿಲೆಯೆಂದು ಭಾವಿಸರು. ವೃಥಾ ಇಲ್ಲದ ಸಂಶಯಕ್ಕೆ ಇಂಬುಗೊಡುವೆಯೇಕೆ?" ಎಂದು ಕೇಳಿದಳು.

ಅನಂತನು "ಅಮ್ಮಾ, ಹಾಗಾದರೆ ಸೀತೆಯು ಸಮ್ಮತಿಸಿದಂತಾಯಿತಲ್ಲ! ಆಕೆಯ ಒಪ್ಪಿಗೆ ದೊರಕಿಸಿಕೊಟ್ಟ ನಿನಗೆ ನಾನು ತುಂಬಾ ಕೃತಜ್ಞ. ಈಗ ನಮ್ಮಿಬ್ಬರನ್ನೂ ಆಶೀರ್ವದಿಸು." ಎಂದು ಹೇಳಿ ಅವಳ ಕಾಲಿಗೆರಗಿದ.

ಅವರಿಬ್ಬರನ್ನೂ ಕಾವೇರಮ್ಮನು ಹರಸಿದಳು.

ಕಾವೇರಮ್ಮನು ಎಲ್ಲ ಸಂಗತಿಯನ್ನೂ ಚಂದ್ರಭಾಗಮ್ಮನಿಗೆ ತಿಳಿಸಿ, ಪರಿಪರಿಯಾಗಿ ಹೇಳಿ, ಅವಳ ಸಮ್ಮತಿ ಪಡೆದಳು.

ವಿವಾಹ ಮುಹೂರ್ತವನ್ನು ನಿಶ್ಚಯಿಸಬೇಕೆಂಬುದಾಗಿ ಲೀಲೆಯು ಸೂಚಿಸಿದಳು. ಬೇಸಿಗೆಯ ರಜೆಯಲ್ಲಿ ಮದುವೆಯಾಗಬೇಕೆಂಬುದಾಗಿ ಒಮ್ಮತದಿಂದ ನಿಷ್ಕರ್ಷೆಯಾಯಿತು.

ಒಂದೆರಡು ದಿನಗಳಲ್ಲಿ ಸೀತೆಯು ಆರೋಗ್ಯ ಹೊಂದಿದಳು. ದಶಂಬರ ರಜೆಯ ದಿನಗಳು ಹೇಗೆ ಕಳೆದುವೆಂದು ಅನಂತನಿಗೆ ತಿಳಿಯಲಿಲ್ಲ. ಅವನು ಮದರಾಸಿಗೆ ಹೋದ ಮೇಲೆ ಸೀತೆಯೊಂದಿಗೆ ಅವನ ಪತ್ರವ್ಯವಹಾರವು ನಿರಾತಂಕವಾಗಿ ಸಾಗಿತು.

---

## ೧೬

ಸೀತೆಗೆ ಜ್ವರಬರಲಾರಂಭಿಸಿತು. ಪುನಃ ಶೀತವಾಗಿರಬಹುದೆಂದು ಭಾವಿಸಿ, ಚಿಕಿತ್ಸೆ ನಡೆಸಿದರು. ಜ್ವರ ಕಡಿಮೆಯಾಗಲಿಲ್ಲ. ಚಳಿಜ್ವರವಾಗಿರ

ಬಹುದೆಂದು ನೆನಸಿ, ವೈದ್ಯರಿಂದ ಮದ್ದು ಕೊಡಿಸಿದರು. ಜ್ವರವು ಮಾತ್ರ ಇಳಿಯಲೆ ಇಲ್ಲ.

ಅವಳು ಕೆಮ್ಮುತ್ತಿದ್ದುದರಿಂದ ಎಲ್ಲರೂ ದಿಗಿಲುಬಿದ್ದರು. ಅವಳಿಗೆ ಭಯಂಕರ ರೋಗ ತಗಲಿರಬಹುದೆಂಬ ಹೆದರಿಕೆ ಹುಟ್ಟಿದ ಕೂಡಲೆ ಚಂದ್ರ ಭಾಗಮ್ಮನು ನಾನಾ ದೇವರಿಗೆ ನಾನಾ ಹರಕೆಗಳನ್ನು ಹೊತ್ತಳು. ಅಂಬಲ ಪಾಡಿ ದೇವಸ್ಥಾನದಲ್ಲಿ ಕೇಳಿಸಿದಳು. ಸೀತೆಯು ಸೌಖ್ಯವಾಗುವಳೆಂದು ಎಲ್ಲರೂ ಅವಳನ್ನು ಸಂತೈಸಲು ಯತ್ನಿಸಿದರೂ, ಅವಳ ಮನಸ್ಸಿಗೆ ಮಾತ್ರ ಅವರ್ಣನೀಯವಾದ ಅಂಜಿಕೆಯೊಂದು ಅಂಟಿಕೊಂಡಿತ್ತು.

ಸೀತೆಯ ಕಫವನ್ನು ಪರೀಕ್ಷಿಸಿ, ರೋಗವು ಕ್ಷಯವಾಗಿರಬಹುದೆಂದು ಡಾಕ್ಟರರು ಅಭಿಪ್ರಾಯಪಟ್ಟರು. ಆದರೆ ಅವರು ತಮ್ಮ ಸಂಶಯವನ್ನು ಚಂದ್ರಭಾಗಮ್ಮನಿಗೆ ಹೇಳದೆ, ಗೋಪಾಲರಾಯರಿಗೆ ಮಾತ್ರ ತಿಳಿಸಿದರು.

ಮರುದಿನ ಗೋಪಾಲರಾಯರೂ ಕಾವೇರಮ್ಮನೂ ಚಂದ್ರಭಾಗ ಮ್ಮನ ಮನೆಗೆ ಬಂದು ಸೀತೆಯ ಸ್ಥಿತಿಯನ್ನು ಕುರಿತು ವಿಚಾರಿಸಿದರು. ಜ್ವರವು ಇನ್ನೂ ಇಳಿಮೊಗವಾಗಿರಲಿಲ್ಲ. ಎಷ್ಟೋ ಸಮಯದಿಂದ ಅವಳ ಸ್ಥಿತಿಯು ಹೀಗೆಯೆ ಇರುವುದರಿಂದ, ಅವಳನ್ನು ಮದರಾಸಿಗೆ ಕರೆದು ಕೊಂಡು ಹೋಗಿ ಪರೀಕ್ಷೆ ಮಾಡಿಸುವುದು ಒಳ್ಳೆಯದೆಂದು ರಾಯರು ಸೂಚಿಸಿದರು. ಆದರೆ, ಜೋಯಿಸರೂ ಎಷ್ಟೋ ಕಡೆಯ ದೇವರೂ ಕೂಡ ಸೀತೆಯು ರೋಗವಿಮುಕ್ತಳಾಗುವಳೆಂದು ಆಶ್ವಾಸನೆ ಕೊಟ್ಟಿದ್ದರೂ, ಆಕೆ ಯನ್ನು ಮದರಾಸಿಗೆ ಕರೆದುಕೊಂಡು ಹೋಗಿ ಚಿಕಿತ್ಸೆ ನಡೆಸಿದರೆ, ದೇವರು ಗಳು ಮುನಿದಾರೆಂಬ ಭಯದಿಂದ ಉಡುಪಿಯಲ್ಲೆ ಇದ್ದು ಬೇಕಾದ ಚಿಕಿತ್ಸೆ ನಡೆಯಿಸಬಹುದೆಂದು ಚಂದ್ರಭಾಗಮ್ಮನು ಹಟ ಹಿಡಿದಳು.

ಸೀತೆಯು ತನ್ನ ಅನಾರೋಗ್ಯದ ವಿಚಾರವಾಗಿ ಅನಂತನಿಗೆ ಬರೆದಿರ ಲಿಲ್ಲ, ಕಾವೇರಮ್ಮನಾಗಲಿ ಗೋಪಾಲರಾಯರಾಗಲಿ ಈ ಸಂಗತಿಯನ್ನು ಅವನಿಗೆ ಬರೆಯಬಾರದೆಂದೂ ಹಾಗೆ ಬರೆದುದಾದರೆ ಅವನು ಇದೇ

ಯೋಚನೆಯಿಂದ ವ್ಯಾಸಂಗವನ್ನು ಮೂಲೆಗೊತ್ತಬಹುದೆಂದೂ ತಾನು ಕ್ಷಿಪ್ರದಲ್ಲಿ ಸೌಖ್ಯವಾಗುವೆನೆಂದೂ ಇನ್ನು ಸ್ವಲ್ಪ ಸಮಯದಲ್ಲಿ ಅವನು ಪರೀಕ್ಷೆಮುಗಿಸಿ ಹಿಂದಿರುಗುವನಾದುದರಿಂದ ಅಪ್ಪರ ವರೆಗೆ ಅವನಿಗೆ ತನ್ನ ಸ್ಥಿತಿಯ ಅರಿವಾಗಬಾರದೆಂದೂ ಸೀತೆಯು ಬೇಡಿದ್ದುದರಿಂದ, ಅನಂತನಿಗೆ ಇಪ್ಪರ ವರೆಗೆ ಯಾವ ಸಂಗತಿಯೂ ತಿಳಿದಿರಲಿಲ್ಲ.

ಸೀತೆಯ ಸ್ಥಿತಿ ತೀರ ಕೆಡುತ್ತ ಬಂತು. ಇನ್ನೂ ಹೀಗೆಯೆ ಬಿಟ್ಟರೆ ರೋಗವು ಕೈಮೀರಬಹುದೆಂದು ಡಾಕ್ಟರರು ಗೋಪಾಲರಾಯರನ್ನೆಚ್ಚರಿಸಿದರು. ಈಗ ತಾನು ಮಾಡಬೇಕಾದ ಕರ್ತವ್ಯವೇನೆಂದು ರಾಯರು ಯೋಚಿಸತೊಡಗಿದರು. ಅನಂತನಿಗೆ ತಿಳಿಸಿದರೆ, ಅವನು ಕೂಡಲೆ ಬಂದು, ಚಂದ್ರಭಾಗಮ್ಮನನ್ನೊಪ್ಪಿಸಿ, ಸೀತೆಯನ್ನು ಮದರಾಸಿಗೆ ಕರೆದುಕೊಂಡು ಹೋಗಿ ಚಿಕಿತ್ಸೆ ಮಾಡಿಸಬಹುದು. ಆದರೆ ಅವನು ಈ ಸಲ ಪರೀಕ್ಷೆಗೆ ಕುಳಿತುಕೊಳ್ಳಲಾಗುವುದಿಲ್ಲ. ಅವನಿಗೆ ತಾನು ತಿಳಿಸದಿದ್ದರೆ, ಅವನು ಊರಿಗೆ ಬರುವುದರೊಳಗಾಗಿ ಏನಾದರೂ ಹೆಚ್ಚುಕಡಿಮೆಯಾದುದೆ ಆದರೆ, ಅವನು ತಮ್ಮನ್ನೆಲ್ಲಾ ದೂರುವುದು ಮಾತ್ರವಲ್ಲದೆ, ಸಹಿಸಲಸಾಧ್ಯವಾದ ಚಿಂತೆಗೊಳಗಾದಾನು! ಆದುದರಿಂದ ಎಲ್ಲ ಸಂಗತಿಯನ್ನೂ ಅನಂತನಿಗೆ ತಿಳಿಸುವುದೊಳ್ಳೆಯದೆಂದು ನಿಶ್ಚಯಿಸಿ, ಯಾರಿಗೂ ತಿಳಿಯದಂತೆ ಗೋಪಾಲ ರಾಯರು ಅನಂತನಿಗೆ ತಂತಿಕೊಟ್ಟರು.

ಮರುದಿನ ರಾತ್ರಿ ಒಂಬತ್ತು ಗಂಟೆಗೆ ಅನಂತನು ಚಂದ್ರಭಾಗಮ್ಮನ ಮನೆಹೊಕ್ಕಾಗ ಎಲ್ಲರೂ ಆಶ್ಚರ್ಯಚಕಿತರಾದರು. ಅವನು ನೇರವಾಗಿ ರೋಗಿಯ ಕೋಣೆಗೆ ಹೋದ. ಅವನನ್ನು ನೋಡಿ ಸೀತೆಯು ತನ್ನ ಕಳೆ ಗುಂದಿದ್ದ ಮುಖದ ಮೇಲೆ ಮುಗುನಗೆ ಮೂಡಿಸಲು ಹವಣಿಸಿದಳು. ಅಲ್ಲೇ ಇದ್ದ ಡಾಕ್ಟರರನ್ನು ಅನಂತನು ಬೇರೊಂದು ಕಡೆಗೆ ಕರೆದು, ಎಲ್ಲ ಸಂಗತಿಯನ್ನೂ ವಿಚಾರಿಸಿದ. ಸೀತೆಯನ್ನು ಕೂಡಲೆ ಮದರಾಸಿಗೆ ಕರೆದುಕೊಂಡು ಹೋಗದಿದ್ದರೆ, ಆಕೆಯು ಬದುಕುವ ಆಶೆಯಿಲ್ಲವೆಂದು ಡಾಕ್ಟರರು ನಿರ್ಧಾರವಾಗಿ ತಿಳಿಸಿದರು.

ಅನಂತನು ಮನೆಗೆ ಹೋಗಿ ಬೇಗನೆ ಬರುವೆನೆಂದು ಹೇಳಿ ಹೊರಟ. ಒಂದು ಗಂಟೆಯೊಳಗಾಗಿ ಗೋಪಾಲರಾಯ ಕಾವೇರಮ್ಮರೊಂದಿಗೆ ಹಿಂದಿರುಗಿದ. ಹಾದಿಯಲ್ಲಿ ಅವನು ಚಂದ್ರಭಾಗಮ್ಮನ ಹಟದ ಸಂಗತಿ ಯನ್ನು ಕೇಳಿ, ಅವಳನ್ನು ಹೇಗೆ ಒಲಿಸಿಕೊಳ್ಳಬೇಕೆಂಬುದನ್ನು ನಿರ್ಧರಿಸಿದ. ಅವನ ಉಪಾಯವು ಯೋಗ್ಯವೆಂಬುದಾಗಿ ಗೋಪಾಲರಾಯರೂ ಅಭಿ ಪ್ರಾಯಪಟ್ಟರು.

ಅವರು ಹೋಗಿ ಮುಟ್ಟಿದಾಗ ಚಂದ್ರಭಾಗಮ್ಮನು ಒಂದು ಗೋಡೆಗೆ ಒರಗಿ ಕಣ್ಣೀರು ಸುರಿಸುತ್ತಿದ್ದಳು. ಲೀಲೆಯು ಸಣ್ಣ ಮುಖ ಮಾಡಿ ಅವಳ ಬಳಿ ಕುಳಿತಿದ್ದಳು.

ಕಾವೇರಮ್ಮನು ಚಂದ್ರಭಾಗಮ್ಮನ ಇನ್ನೊಂದು ಮಗ್ಗುಲಿಗೆ ಕುಳಿತು ಕೊಂಡಳು. ಗೋಪಾಲರಾಯರೂ ಅನಂತನೂ ಲೀಲೆಯು ಹಾಸಿದ ಚಾಪೆಯ ಮೇಲೆ ಕುಳಿತರು. ಅನಂತನು ಮಾತನ್ನು ಪ್ರಾರಂಭಿಸಿದ.

''ಅತ್ತೆ, ನೀವು ಹೀಗೆ ಚಿಂತಿಸುತ್ತ ಕುಳಿತುದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ. ಸೀತೆಗೆ ಯಾವುದೊ ಭಯಂಕರ ರೋಗವು ತಗ ಲಿರಬಹುದೆಂದು ನೀವು ಭಾವಿಸಿದಂತೆ ತೋರುತ್ತದೆ. ನಿಮ್ಮ ಹುಚ್ಚಿಗೆ ನಾನೇನೆನ್ನಲಿ! ಒಬ್ಬ ಪ್ರಸಿದ್ಧ ಬೈರಾಗಿಯು ಮೊನ್ನೆ ಮದರಾಸಿಗೆ ಬಂದಿ ದ್ದಾನೆ. ಇಂತಹ ರೋಗದಿಂದ ನರಳುವ ಎಷ್ಟೋ ಜನರನ್ನು ಅವನು ಬದು ಕಿಸಿದ್ದಾನಂತೆ! ಇದರ ಹೆಸರು 'ಪಿತ್ತಪ್ರಕೋಪ'ವಂತೆ! ಸೀತೆಗೆ ಆಗಾಗ ಕೆಮ್ಮು ಬರುತ್ತದಲ್ಲವೆ?''

''ಅಹುದು. ಅವಳು ಒಮ್ಮೆ ಕೆಮ್ಮಲು ತೊಡಗಿದಳೆಂದರೆ, ಕೆಮ್ಮು ಯಾವಾಗ ನಿಂತೀತೆಂದು ನನಗೆ ಎದೆ ಡವಡವ ಬಡಿದುಕೊಳ್ಳುತ್ತದೆ.''

''ಸರಿ, ಸರಿ. ಕೆಮ್ಮುವಾಗ ಕಫ ಹೋಗುತ್ತದಲ್ಲವೆ?''

"ಅಹುದು. ಮೊನ್ನೆ ಕಫವನ್ನು ಪರೀಕ್ಷಿಸಿ, ಅವಳನ್ನು ಮದರಾಸಿಗೆ ಕರೆದುಕೊಂಡು ಹೋಗಬೇಕೆಂದು ಡಾಕ್ಟರರು ಹೇಳಿದರು."

"ಈ ಡಾಕ್ಟರರಿಗೆ ಈ ರೋಗದ ಗುಟ್ಟೇನು ಗೊತ್ತು! ಎಂ. ಬಿ. ಬಿ. ಎಸ್. ಎಂದು ಡಿಗ್ರಿ ಪಡೆದ ಕೂಡಲೆ ಎಲ್ಲ ರೋಗಗಳೂ ಚಿಕಿತ್ಸೆಯೂ ತಮಗೆ ತಿಳಿದುವೆಂಬುದಾಗಿ ಇವರು ಭಾವಿಸುತ್ತಾರೆ. ನಮ್ಮ ಆಯುರ್ವೇದ ದಲ್ಲಿ ಎಂತೆಂತಹ ಅಮೂಲ್ಯ ವಿಷಯಗಳಿವೆಯೆಂಬುದು ಈ ಮಂಕರಿಗೇನು ಗೊತ್ತು! ಯಾವ ಡಾಕ್ಟರರನ್ನು ಬೇಕಾದರೂ ವಿಚಾರಿಸಿ ನೋಡು—'ಪಿತ್ತ ಪ್ರಕೋಪ'ವೆಂಬ ರೋಗವಿದೆಯೆ?—ಎಂದು. ಈ ಡಾಕ್ಟರ್ ಪ್ರಾಣಿಗಳು ಪಿಳಿಪಿಳಿ ನೋಡುತ್ತ ಮಾತಿಲ್ಲದೆ ಮೂಕರಾಗುವುದನ್ನು ಕಾಣುವಿರಿ! ನಾನು ಹೇಳಿದ ಬೈರಾಗಿಯಾದರೊ ಇಂತಹ ಸಾವಿರಾರು ರೋಗಿಗಳನ್ನು ಗುಣ ಪಡಿಸಿರುವನು. ಅವನಿಗೆ ಹಿಮಾಲಯದ ಯಾರೊ ಋಷಿವರ್ಯನು ಒಂದು ದಿವ್ಯ ಮೂಲಿಕೆಯನ್ನು ಕರುಣಿಸಿದ್ದಾನಂತೆ! ಆ ಮೂಲಿಕೆಯನ್ನು ನಿಂಬೆಹಣ್ಣಿನ ರಸದಲ್ಲಾಗಲಿ ಗೋಮೂತ್ರದಲ್ಲಾಗಲಿ ಅರೆದು, ನಾಲಗೆಗೆ ಒಮ್ಮೆ ತಾಗಿಸಿದರೆ ಸರಿ! ದೇಹದಲ್ಲಿರುವ ರೋಗಾಣುಗಳೆಲ್ಲಾ ಸಾಯುವು ವಂತೆ! ಕೆಮ್ಮು ನಿಲ್ಲುವುದಂತೆ! ಕಡೆಗೆ ಒಂದು ತಿಂಗಳ ವರೆಗೆ ಸ್ವಲ್ಪ ಪಥ್ಯ ಮಾಡಬೇಕು. ಶಕ್ತಿ ತುಂಬುವ ಔಷಧಿಯನ್ನು ಸೇವಿಸಬೇಕು. ಅವನು ಇನ್ನು ಒಂದು ವಾರದ ವರೆಗೆ ಮದರಾಸಿನಲ್ಲಿರುತ್ತಾನಂತೆ. ಆ ಮೇಲೆ ಅವನು ಕಲ್ಕತ್ತೆಗೊ ಬೇರೆಲ್ಲಿಗೊ ಹೋಗುವನಂತೆ. ಯಾವ ಪಟ್ಟಣದಲ್ಲೆ ಆಗಲಿ ಒಂದು ತಿಂಗಳಿಗಿಂತ ಹೆಚ್ಚು ಸಮಯ ನಿಲ್ಲಬಾರದೆಂದು ಅವನ ಗುರುಗಳಾದ ಆ ಋಷಿವರ್ಯರ ಆಜ್ಞೆಯಾಗಿದೆಯಂತೆ! ಮದ್ದಿಗೆ ಬೆಲೆ ಪಡೆದುಕೊಳ್ಳಲಾಗದೆಂದೂ ಅವನ ಖರ್ಚಿನ ಪುಟ್ಟಿಗೆ ಅಗತ್ಯವಿದ್ದರೆ ಒಬ್ಬೊಬ್ಬ ರೋಗಿಯಿಂದ ಬರೀ ಒಂದೂಕಾಲಾಣೆ ಮಾತ್ರ ಸ್ವೀಕರಿಸಬಹು ದೆಂದೂ ಅವನಿಗೆ ಅಪ್ಪಣೆಯಿದೆಯಂತೆ! ಮದರಾಸಿನಲ್ಲಿ ಅವನನ್ನು ಧನ್ವಂತರಿಯ ಅವತಾರವೆಂದು ಪೂಜಿಸುತ್ತಾರೆ. ಮೊನ್ನೆ ಒಂದು ದಿನ ಅವನ ಸಂಗತಿಯೆಲ್ಲಾ 'ಹಿಂದೂ' ಪೇಪರಿನಲ್ಲಿ ಬಂದಿತ್ತು."

ಅನಂತನು ಗೋಪಾಲರಾಯರ ಕಡೆಗೆ ನೋಡಲು, ಅವರು ತಲೆ ದೂಗಿದರು. ಅನಂತನು ತುದಿಮೊದಲಿಲ್ಲದ ಹರಟೆಯನ್ನು ಮುಂದು ವರಿಸಿದ.

"ಈ ಸಂಗತಿಯನ್ನು ಪೇಪರಿನಲ್ಲಿ ಓದಿದ ಕೂಡಲೆ ಅವನನ್ನು ನೋಡ ಬೇಕೆಂದು ನನಗೆ ಆಶೆಯಾಯಿತು. ನಿನ್ನೆ ಸಾಯಂಕಾಲ ಅಲ್ಲಿಗೆ ಹೋದೆ. ಅವನಿದ್ದ ಮನೆಯಲ್ಲಿ ಜನಸಂದಣಿಯು ಬಹಳ ದಟ್ಟವಾಗಿತ್ತು. ಬರೆ ಮೂಳೆಯಂತಿದ್ದ ಒಬ್ಬ ಮುದುಕನು ಆ ಮನೆಯಿಂದ ಹೊರಬಿದ್ದ. ಅವನು ಈ ಪಿತ್ತಪ್ರಕೋಪದಿಂದ ನರಳುತಿದ್ದನೆಂದೂ ಅವನಿಗೆ ಕಫದೊಟ್ಟಿಗೆ ನೆತ್ತರು ಸಹ ಹೋಗುತಿತ್ತೆಂದೂ ಒಂದು ಗಳಿಗೆಯ ಹಿಂದೆ ಅವನನ್ನು ಅಲ್ಲಿಗೆ ಹೊತ್ತುತಂದಿದ್ದರೆಂದೂ ಆಗ ತಾನೆ ಅವನು ಗುಣಹೊಂದಿ, ನಡೆದು ಕೊಂಡು ಮನೆಗೆ ಹೋಗಲು ಹೊರಟನೆಂದೂ ಅಲ್ಲಿದ್ದವರು ತಿಳಿಸಿದರು. ನಾನು ಬೆರಗಾದೆ.

"ಅಷ್ಟರಲ್ಲಿ ನನ್ನ ಮಿತ್ರನೊಬ್ಬನು ನನಗೆ ಭೇಟಿಯಾದ. ಅವನು ಇದೇ ಊರವ; ಎಂ. ಬಿ. ಬಿ. ಎಸ್. ಮೂರನೆ ವರ್ಷದಲ್ಲಿದ್ದಾನೆ. ಸೀತೆ ಯನ್ನೇಕೆ ಕರೆತರಿಸಿ ಚಿಕಿತ್ಸೆಮಾಡಿಸಬಾರದೆಂದು ಅವನು ಕೇಳಲು, ನಾನು ಸೀತೆಗೇನಾಗಿದೆಯೆಂದು ವಿಚಾರಿಸಿದೆ.

"ಸೀತೆಯು ಇಂತಹ ರೋಗದಿಂದ ನರಳುತ್ತಾಳೆಂದು ಅವನ ತಂಗಿ ಅವನಿಗೆ ಬರೆದಿದ್ದಳಂತೆ. ಅವನ ಮಾತಿನಲ್ಲಿ ವಿಶ್ವಾಸ ಹುಟ್ಟಿ ನಿನ್ನೆ ರಾತ್ರಿಯ ರೈಲಿನಲ್ಲಿ ಹೊರಟುಬಂದೆ. ತಡವಾದರೆ ಆ ಬೈರಾಗಿಯನ್ನು ಹುಡುಕಿ ಕೊಂಡು ಕಲ್ಕತ್ತಾನಗರಕ್ಕೆ ಹೋಗಬೇಕಾದೀತು. ನಾಳೆ ಬೆಳಗ್ಗೆ ಇಲ್ಲಿಂದ ಒಂದು ಕಾರಿನಲ್ಲಿ ಮಂಗಳೂರಿಗೆ ಹೋಗಿ ನಾಳೆಯ ರೈಲಿನಲ್ಲಿ ಮದರಾ ಸಿಗೆ ಹೋಗಬೇಕು. ಆದುದರಿಂದ ಅತ್ತೆ, ನಾಳೆ ನಾವು ಸೀತೆಯನ್ನು ಕರೆದುಕೊಂಡು ಹೋಗುತ್ತೇವೆ. ಇನ್ನು ಒಂದು ತಿಂಗಳು ನಾಲ್ಕು ದಿವಸ ಗಳೊಳಗಾಗಿ ನಿಮ್ಮ ಸೀತೆಯು ಸುಖವಾಗಿ ಹಿಂದಿರುಗುವಳು."

ಅನಂತನ ಮುಖದಲ್ಲಿ ಹಾಸ್ಯರೇಖೆಯೂ ಸುಳಿಯಲಿಲ್ಲ. ಚಂದ್ರ ಭಾಗಮ್ಮನು ಅವನ ಮಾತುಗಳಿಗೆ ಮರುಳಾಗಿ ಅವನನ್ನು ಸಂಪೂರ್ಣ ನಂಬಿದಳು. "ಜ್ಯೋತಿಷ್ಯವು ಸುಳ್ಳೆಂದು ಈಗೀಗ ಎಲ್ಲರೂ ಭಾವಿಸು ತ್ತಾರೆ. ಆದರೆ ಜೋಯಿಸರು ಹೇಳುವುದೆಲ್ಲಾದರೂ ಸುಳ್ಳಾದೀತೇ? ಎಷ್ಟೊ ದೇವಸ್ಥಾನಗಳಲ್ಲಿ ನಾನು ಸೀತೆಯ ವಿಷಯ ಕೇಳಿದಾಗ, ಅವಳು ರೋಗವಿಮುಕ್ತಳಾಗುವಳೆಂದು ದೇವರುಗಳ ಅಪ್ಪಣೆಯಾದುದು ಎಂದಾ ದರೂ ಸುಳ್ಳಾದೀತೇ? ಇಲ್ಲವಾದರೆ ಎಲ್ಲಿಯ ಬೈರಾಗಿ! ಆ ಬೈರಾಗಿಗೆ ಹಿಮಾಲಯಪರ್ವತದಲ್ಲಿ ಒಬ್ಬ ಋಷಿವರ್ಯನು ಅಮೂಲ್ಯವಾದ ಮೂಲಿಕೆಯನ್ನು ದಯಪಾಲಿಸುವುದೆಂದರೇನು! ಸೀತೆಯ ಅಸ್ವಸ್ಥದ ವಿಚಾರವು ಮಿತ್ರನ ಮೂಲಕ ಅನಂತನಿಗೆ ತಿಳಿಯುವುದೆಂದರೇನು! ಇದೆ ಲ್ಲವೂ ದೈವ ಲೀಲೆ! ನೀವು ನಾಳೆ ಪ್ರಾತಃಕಾಲದಲ್ಲೆ ಹೊರಡಿ. ಈ ಶುಭ ವಾರ್ತೆಯನ್ನು ಸೀತೆಗೆ ತಿಳಿಸುತ್ತೇನೆ" ಎಂದು ಉದ್ಗಾರವೆಳೆಯುತ್ತ ಚಂದ್ರಭಾಗಮ್ಮನು ರೋಗಿಯ ಕೋಣೆಗೆ ಹೋದಳು.

---

## ೨೦

ಮದರಾಸಿನ ಪ್ರಸಿದ್ಧ ಡಾಕ್ಟರರು ಸೀತೆಯನ್ನು ಪರೀಕ್ಷಿಸಿ, ರೋಗವು ಸ್ವಲ್ಪ ಪ್ರಬಲಿಸಿದೆಯೆಂದೂ 'ಎಕ್ಸ್‌ರೇ ಫೊಟೊ' ತೆಗೆಸಬೇಕೆಂದೂ ಹೇಳಿ ದರು. 'ಎಕ್ಸ್‌ರೇ ಫೋಟೊ' ನೋಡಿ, ಸೀತೆಯ ಬಲ ಶ್ವಾಸಕೋಶವು ತೀರ ಹಾಳಾಗಿದೆಯೆಂದೂ ಎಡ ಶ್ವಾಸಕೋಶವು ಸ್ವಲ್ಪ ಹಾಳಾಗಿದೆಯೆಂದೂ ಹೇಳಿ, ರೋಗಿಯು ಬದುಕುವುದು ಅಸಂಭವವಾದರೂ ಬೆಂಗಳೂರಿಗೆ ಕರೆದುಕೊಂಡು ಹೋಗಿ ಚಿಕಿತ್ಸೆ ನಡೆಸಿದರೆ, ದೈವೇಚ್ಛೆಯಿದ್ದರೆ, ಬದುಕ ಬಹುದೆಂದೂ ಡಾಕ್ಟರರು ಅಭಿಪ್ರಾಯವಿತ್ತರು.

ಅವರು ಹಾಗೆ ಹೇಳಬಹುದೆಂದು ಗೋಪಾಲರಾಯರೂ ಅನಂತನೂ ಮೊದಲೆ ಭಾವಿಸಿದ್ದರು. ಆದುದರಿಂದ ಅನಂತನು ಸೀತೆಯನ್ನು

ಬೆಂಗಳೂರಿಗೆ ಕರೆದುಕೊಂಡು ಹೋಗಬೇಕು; ಗೋಪಾಲರಾಯರು ಉಡುಪಿಗೆ ಹಿಂದಿರುಗಿ, ಲೀಲೆಯನ್ನು ತಮ್ಮ ಮನೆಯಲ್ಲಿರುವಂತೆ ವ್ಯವಸ್ಥೆಮಾಡಿ, ಚಂದ್ರಭಾಗಮ್ಮನೊಂದಿಗೆ ಬೆಂಗಳೂರಿಗೆ ಬರಬೇಕು ಎಂದು ನಿರ್ಧರಿಸಿದರು. ಆ ಬೈರಾಗಿಯು ಬೆಂಗಳೂರಿಗೆ ಹೋದನೆಂದು ಸುದ್ದಿಯಿರುವುದರಿಂದ ಸೀತೆಯನ್ನು ಬೆಂಗಳೂರಿಗೆ ಕರೆದುಕೊಂಡು ಹೋಗಿರುವುದಾಗಿ ಚಂದ್ರಭಾಗಮ್ಮನಿಗೆ ತಿಳಿಸಬೇಕೆಂದು ಅನಂತನು ಗೋಪಾಲರಾಯರನ್ನು ಎಚ್ಚರಿಸಿದ.

ಅಂದು ರಾತ್ರಿಯೆ ಗೋಪಾಲರಾಯರು ಉಡುಪಿಗೂ ಅನಂತನು ಸೀತೆಯೊಂದಿಗೆ ಬೆಂಗಳೂರಿಗೂ ಹೊರಟರು.

ಅನಂತ ಸೀತೆಯರು ಕುಳಿತಿದ್ದ 'ಸೆಕೆಂಡ್‌ಕ್ಲಾಸ್ ಕಂಪಾರ್ಟ್‌ಮೆಂಟಿ'ನಲ್ಲಿ ಬೇರಾರೂ ಇರಲಿಲ್ಲ. ಸೀತೆಗೆ ಉಡುಪಿಯಿಂದ ಮದರಾಸಿಗೆ ಬಂದ ಹೆಚ್ಚಿನ ದಣುವಿರಬಹುದೆಂದು ಭಾವಿಸಿ, ಅನಂತನು ಮಾತುಕತೆಯಾಡದೆ, ಅವಳನ್ನು ನಿದ್ರಿಸಬಿಟ್ಟ.

ಸೀತೆಯು ನಿದ್ದೆಹೋಗಲು, ಅನಂತನು ಅವಳ ಮುಖವನ್ನೆ ನೋಡುತ್ತ ವಿಚಾರಮಗ್ನನಾಗಿ ಕುಳಿತ. ನಿದ್ರಿಸಬೇಕೆಂದು ಎಷ್ಟು ಪ್ರಯತ್ನಿಸಿದರೂ, ಅವನಿಗೆ ನಿದ್ದೆಯೆ ಬರಲೊಲ್ಲದು. ಕಡೆಗೆ ಉಷಃಕಾಲದ ತಂಗಾಳಿಯು ಬೀಸತೊಡಗಲು, ಅವನಿಗೆ ಸ್ವಲ್ಪ ಜೊಂಪು ಹತ್ತಿತು.

ಸೀತೆಗೆ ಪ್ರಾತಃಕಾಲದಲ್ಲಿ ಎಚ್ಚರವಾದಾಗ ಅನಂತನು ಮಲಗಿದ್ದ. ತನಗೋಸುಗ ಅವನು ಪಡುವ ಕಷ್ಟನಷ್ಟಗಳನ್ನು ನೆನೆಯುತ್ತ ಅವಳು ಚಿಂತೆಗೀಡಾದಳು. ಈ ಸಲ ಅವನು ಪರೀಕ್ಷೆಗೆ ಕುಳಿತುಕೊಳ್ಳಲಾಗುವುದಿಲ್ಲ. ಇನ್ನು ತಾನು ಎಷ್ಟು ಕಾಲದ ವರೆಗೆ ಹೀಗೆಯೆ ಬದುಕಿದ್ದು, ಇದ್ದವರಿಗೆಲ್ಲಾ ಉಪದ್ರವಕಾರಿಯಾಗಿರಬೇಕಾಗುವುದೊ ಎಂದು ದುಃಖಿಸಿ, ತನಗೋಸ್ಕರ ಸರ್ವ ಸುಖವನ್ನೂ ತೊರೆಯಲು ಸಿದ್ಧನಾದ ಅನಂತನನ್ನೆ

ಎವೆಯಿಕ್ಕದೆ ನೋಡಿದಳು. ಇನ್ನೂ ತನಗಾಗಿ ಅವನೆಷ್ಟು ಬನ್ನಬಡಬೇಕಾಗು ವುದೊ ಎಂದು ಯೋಚಿಸುತ್ತ ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಅನಂತನ ನಿದ್ರಾಭಂಗವಾಯಿತು. ಅವನು ತಟ್ಟನೆ ಎದ್ದು ಕುಳಿತು, "ಸೀತೆ, ಇದೇನು! ಅಳುವೆಯೇಕೆ? ನಿದ್ದೆ ಬರಲಿಲ್ಲವೆ? ದೇಹದಲ್ಲೆಲ್ಲಾದರೂ ನೋವಾಗುವುದೆ? ಸ್ವಲ್ಪ ಸಹಿಸಿಕೊ. ಇನ್ನು ಬೆಂಗಳೂರಿಗೆ ವಿಶೇಷ ದೂರ ವಿಲ್ಲ. ಒಮ್ಮೆ ಅಲ್ಲಿಗೆ ಮುಟ್ಟಿದೆವೆಂದರೆ ಈ ರೈಲಿನ ಕಡಕಡಾಟವು ಮುಗಿ ಯುವುದು" ಎಂದು ಸಮಾಧಾನಪಡಿಸಲು ಯತ್ನಿಸಿದ.

ಸೀತೆಯ ದುಃಖವು ಶಮನವಾಗುವುದರ ಬದಲು ಇನ್ನೂ ಹೆಚ್ಚಾ ಯಿತು. ಆಕೆಯ ಅಳುವಿನ ಮಧ್ಯದಲ್ಲಿ, "........ ...ನಾವಿಲ್ಲಿಗೇಕೆ ಬಂದೆವು? ............ಉಡುಪಿಯಲ್ಲೆ ನಿಲ್ಲಬಾರದಾಗಿತ್ತೆ?............" ಎಂಬ ಮಾತು ಗಳು ಅನಂತನಿಗೆ ಕೇಳಿಸಿದುವು.

"ಸೀತೆ, ನೀನು ಸೌಖ್ಯವಾಗಬೇಕೆಂದಲ್ಲವೆ ನಾವಿಲ್ಲಿಗೆ ಬಂದಿರು ವುದು! ಏನೇನನ್ನೆಲ್ಲಾ ಯೋಚಿಸಿಕೊಂಡು ವೃಥಾ ಚಿಂತಿಸುವೆಯೇಕೆ? ಆ ಬೈರಾಗಿಯ ಚಿಕಿತ್ಸೆ ಮಾಡಿಸಲಿಲ್ಲವೆಂದು ನಿರಾಶಳಾದೆಯಾ? ಬೈರಾಗಿಯ ಸಂಗತಿಯೆಲ್ಲಾ ಸುಳ್ಳು! ಹಾಗೆ ಹೇಳದಿದ್ದರೆ ನಿನ್ನನ್ನು ಇತ್ತ ತರಲು ನಿನ್ನ ತಾಯಿಯು ಒಪ್ಪುತ್ತಿರಲಿಲ್ಲ. ಸಾಧ್ಯವಿರುವ ಚಿಕಿತ್ಸೆಯನ್ನೆಲ್ಲಾ ಮಾಡಿಸು ತ್ತೇವೆ. ಮುಖ್ಯವಾಗಿ ನೀನು ಸಂತೋಷಚಿತ್ತಳಾಗಿರಬೇಕು. ನೀನು ಕ್ರಮೇಣ ಸೌಖ್ಯವಾಗುವೆಯೆಂಬುದರಲ್ಲಿ ನನಗೆಳ್ಳಷ್ಟೂ ಸಂಶಯವಿಲ್ಲ."

"ಬೈರಾಗಿಯ ವೃತ್ತಾಂತವು ಬರಿ ಕಲ್ಪಿತವೆಂದು ನನಗೆ ಮೊದಲೆ ತಿಳಿದಿತ್ತು. ಆದರೆ ನನ್ನನ್ನು ಇಲ್ಲಿಗೇಕೆ ಕರೆತಂದಿರಿ?"

"ಇದೊಳ್ಳೆ ಪ್ರಶ್ನೆ! ನೀನು ರೋಗದಿಂದ ನರಳುತ್ತಿರುವಾಗ ನಮ್ಮಿಂದ ಸಾಧ್ಯವಿರುವ ಸಹಾಯವನ್ನು ನಾವು ನೀಡದಿರುವೆವೆ? ಮದರಾಸಿನ ಡಾಕ್ಟರರಿಂದ ಪರೀಕ್ಷೆ ಮಾಡಿಸಿದೆವು. ಈಗ ಬೆಂಗಳೂರಿಗೆ ಕರೆದುಕೊಂಡು ಹೋಗುತಿದ್ದೇನೆ."

"ಡಾಕ್ಟರರು ಪರೀಕ್ಷಿಸಿ ಏನು ಹೇಳಿದರು?"

"ಅದೆಲ್ಲ ನಿನಗೇಕೆ? ನಿನಗೆ ನಮ್ಮ ಮೇಲೆ ನಂಬುಗೆಯಿಲ್ಲವೆ? ಡಾಕ್ಟರರು ಏನು ಹೇಳಿದರೆಂಬುದನ್ನು ಕೇಳಿ ನಿನಗಾಗಬೇಕಾದುದೇನು?"

"ಡಾಕ್ಟರರು ಏನು ಅಭಿಪ್ರಾಯವಿತ್ತರೆಂಬುದನ್ನು ದಯವಿಟ್ಟು ನನಗೆ ತಿಳಿಸಬಾರದೆ?"

"ನಿನ್ನನ್ನು ಬೆಂಗಳೂರಿಗೆ ಕರೆದುಕೊಂಡು ಹೋಗಿ, ಚಿಕಿತ್ಸೆ ಮಾಡಿಸಿ ದರೆ, ನೀನು ಬೇಗನೆ ಗುಣಹೊಂದುವೆಯೆಂದರು."

"ಇದು ಸುಳ್ಳು! ನನ್ನಮ್ಮನನ್ನು ಮೋಸಗೊಳಿಸಿದಷ್ಟು ಸುಲಭವಾಗಿ ನನ್ನನ್ನು ಮೋಸಗೊಳಿಸಲು ಸಾಧ್ಯವಿಲ್ಲ."

"ಸುಳ್ಳಾದರೆ ಸುಳ್ಳು. ಅವರು ಹೇಳಿದುದೆಲ್ಲವನ್ನೂ ತಿಳಿಸುತ್ತೇನೆ. ನಿನ್ನನ್ನು ಸ್ವಲ್ಪ ಮುಂಚಿತವಾಗಿಯೆ ಕರೆತಂದಿದ್ದರೆ ಒಳ್ಳೆಯದಿತ್ತೆಂದೂ ಈಗ ಲಾದರೂ ರೋಗವು ಕೈಮಿಾರಿಲ್ಲವೆಂದೂ ಹೇಳಿದರು."

"ನನ್ನನ್ನು ಡಾಕ್ಟರರಿಗೆ ತೋರಿಸಿ, ನೀವು ಮನಸ್ಸಮಾಧಾನಮಾಡಿ ಕೊಂಡಿರಲ್ಲವೆ? ಇನ್ನು ಬೆಂಗಳೂರಿಗೆ ಹೋಗುವುದು ಬೇಡ. ಉಡುಪಿಗೆ ಹೋಗೋಣ. ನಾನು ಅಲ್ಲೆ ಸುಖವಾಗಿ ಪ್ರಾಣಬಿಡುತ್ತೇನೆ."

"ಸೀತೆ, ಹಾಗೆಲ್ಲ ಅಶುಭವಾಕ್ಯಗಳನ್ನಾಡಬೇಡ. ತಿಳಿಯಿತೆ? ನೀನು ಬಹಳ ಹೆದರಿರುವಂತಿದೆ."

"ನನಗೆ ಸಾವಿನ ಹೆದರಿಕೆಯಿಲ್ಲ. ಹುಟ್ಟಿದವರು ಪ್ರತಿಯೊಬ್ಬರೂ ಸಾಯಲೇ ಬೇಕು."

"ಹಾಗಾದರೆ ನೀನು ಅತ್ತುದೇಕೆ?"

"ಪಾಮರಳಾದ ನನ್ನನ್ನು ಬದುಕಿಸಬೇಕೆಂದು ನೀವೆಲ್ಲರೂ ಎಂತಹ ಕಷ್ಟ ನಷ್ಟಗಳನ್ನನುಭವಿಸುತ್ತಿರುವಿರಿ! ನಾನು ಹೀಗೆ ಬದುಕಿ ದಿನಗಳೆಯು

ವುದಕ್ಕಿಂತ ಬೇಗನೆ ಸಾಯುವುದು ಮೇಲಲ್ಲವೆ? ನನಗೆ ಇನ್ನೂ ಎಷ್ಟು ಆಯುಷ್ಯವಿದೆಯೊ ಆ ಬ್ರಹ್ಮದೇವನೆ ಬಲ್ಲ!"

ಸೀತೆಯು ಸೆರಗಿಂದ ಮುಖ ಮುಚ್ಚಿಕೊಂಡು ರೋದಿಸತೊಡಗಿದಳು. ಅನಂತನು, "ಸೀತೆ, ಪುನಃ ಅಳತೊಡಗಿದೆಯೇಕೆ? ಅಳಬೇಡ, ಸೀತೆ! ನೀನು ಅತ್ತರೆ ನನಗಾಗುವ ವ್ಯಥೆಯೆಷ್ಟೆಂಬುದನ್ನು ನೀನರಿಯೆ. ನಿನ್ನ ಸೇವೆ ಮಾಡುವುದೆಂದರೆ ನನಗೆ ಸ್ವರ್ಗಸುಖವನ್ನನುಭವಿಸಿದಂತಾಗುತ್ತದೆ. ನನ್ನ ಪೂರ್ವಪುಣ್ಯದಿಂದಲೆ ನಿನ್ನ ಸೇವೆ ಮಾಡುವ ಈ ಸುಯೋಗವು ನನಗೊದಗಿದೆಯೆಂದು ಭಾವಿಸುತ್ತೇನೆ. ಹುಚ್ಚಿ! ನಿನಗಾಗಿ ನಾವು ಕಷ್ಟನಷ್ಟಗಳನ್ನನುಭವಿಸುತ್ತೇವೆಂದು ಹೇಳಿದೆಯಾ? ನಾನು ಪರಮಾತ್ಮನೊಡನೆ ಪ್ರಾರ್ಥಿಸುವುದೇನೆಂದರೆ, ಸದಾ ನಿನ್ನ ಕಾಲ್ಪಡದಲ್ಲಿ ಕುಳಿತು, ನಿನ್ನ ಸೇವೆ ಮಾಡುವ ಸುಯೋಗವನ್ನೊದಗಿಸೆಂದು! ತಿಳಿಯಿತೆ? ಇನ್ನು ನೀನು ಆ ಹುಚ್ಚು ಕಲ್ಪನೆಗಳನ್ನು ಬಿಡಬೇಕು. ನಿನ್ನ ಬಳಿಯಲ್ಲಿರುವಾಗ, ನಿನ್ನ ಸೇವೆ ಮಾಡುವಾಗ, ನನಗೆ ಸಂತೋಷವೆನಿಸುತ್ತದೆ. ಆದರೆ ನೀನು ಕಣ್ಣೀರಿಡುವುದನ್ನು ನೋಡಿದರೆ ನನಗೆ ತುಂಬಾ ವ್ಯಥೆಯಾಗುತ್ತದೆ. ಸೀತೆ, ನಿನ್ನ ಪ್ರೀತಿಗೆ ಪಾತ್ರನಾದ ನಾನು ವ್ಯಥೆಯನ್ನನುಭವಿಸಬೇಕೆಂದು ನೀನು ಅಪೇಕ್ಷಿಸುವೆಯಾ?"

"ನೀವೆಂದಿಗೂ ದುಃಖಿಸಬಾರದು. ನಾನು ಸತ್ತಾಗಲೂ ನೀವು ದುಃಖಿಸುತ್ತ ಕುಳಿತುಕೊಳ್ಳಬಾರದು."

"ಸರಿ, ಸರಿ. ಹಾಗಾದರೆ ನೀನು ಇನ್ನು ನನ್ನ ಕಷ್ಟನಷ್ಟಗಳನ್ನು ನೆನೆದು ಕಣ್ಣೀರಿಡುವುದಿಲ್ಲವೆಂದು ಮಾತುಕೊಡಬೇಕು. ಯಾವಾಗಲೂ ನಗುಮೊಗದಿಂದಿರಬೇಕು. ಇದಕ್ಕೆ ನಿನ್ನ ಒಪ್ಪಿಗೆಯೆ?"

"ಒಪ್ಪಿದೆ."

ಅನಂತನು ಪೆಟ್ಟಿಗೆಯ ಬಾಗಿಲನ್ನು ತೆರೆದು, ಒಂದು ಸಣ್ಣ ಕರಡಿಗೆಯನ್ನೂ ಒಂದು ಹೂವಿನ ಚೆಂಡನ್ನೂ ಹೊರ ತೆಗೆದ. "ಸೀತೆ, ನಿನ್ನೆ

ಸಾಯಂಕಾಲ ಮದರಾಸಿನಲ್ಲಿ ನಾನೊಬ್ಬನೆ ಹೊರಗೆ ಹೋಗಿದ್ದೆನಲ್ಲವೆ? ನಾನು ಹೋಗಿದ್ದುದು ಇವನ್ನು ಕೊಂಡುಕೊಳ್ಳಲಿಕ್ಕೆಂದು! ಸೀತೆ, ಅಂದು ಸಂಜೆ ಉಡುಪಿಯ ಅಬಕಾರಿ ಮೈದಾನಿನಲ್ಲಿ ನಿನ್ನನ್ನು ದೇವಸಾಕ್ಷಿಯಾಗಿ ವಿವಾಹವಾಗಿರುವೆನು. ನನ್ನ ಪತ್ನಿಯಾದ ನಿನಗೆ ಈ ವೇಷ ಸಲ್ಲದು. ನೀನು ಸುಮಂಗಲಿಯಾಗಿರಬೇಕು. ಇಗೊ, ನಿನಗೆ ನನ್ನ ಕೈಯಿಂದಲೆ ಕುಂಕುಮದ ಬೊಟ್ಟನ್ನಿಡುವೆನು. ನಾವು ಬೆಂಗಳೂರಿನಲ್ಲಿರುವಾಗ ನೀನು ನಿತ್ಯವೂ ಕುಂಕುಮವನ್ನಿಟ್ಟುಕೊಳ್ಳಬೇಕು. ಇದಕ್ಕೆ ನಿನ್ನ ಆಕ್ಷೇಪವೇನೂ ಇಲ್ಲವಷ್ಟೆ!''

ಸೀತೆಯು ಆನಂದಬಾಷ್ಪಗಳನ್ನುದುರಿಸುತ್ತ, ಕಣ್ಮುಚ್ಚಿ ದೇವರನ್ನು ಪ್ರಾರ್ಥಿಸಿದಳು. ಅನಂತನು ಅವಳಿಗೆ ಕುಂಕುಮತಿಲಕವನ್ನಿಟ್ಟು, ಹೂ ಮುಡಿಸಿ, ಕಣ್ಣಣಿಯೆ, ಮನದಣಿಯೆ ಅವಳನ್ನೆ ನೋಡುತ್ತ ಕುಳಿತ. ಬಂಡಿಯು ಬೆಂಗಳೂರು ಸ್ಟೇಶನಿನಲ್ಲಿ ನಿಂತಾಗಲೆ ಅವನು ದೃಷ್ಟಿಯನ್ನು ಈಚೆ ತೆಗೆದುದು!

ಬೆಂಗಳೂರು ದಂಡಿನಲ್ಲಿ ತಿಂಗಳಿಗೆ ಮುವ್ವತ್ತು ರೂಪಾಯಿ ಬಾಡಿಗೆಯ ಮನೆಯನ್ನು ನಿಶ್ಚಯಿಸಿ, ಅನಂತನು ಸೀತೆಯೊಂದಿಗಿರತೊಡಗಿದ.

ಒಂದೆರಡು ದಿನಗಳಲ್ಲೆ ಗೋಪಾಲರಾಯರು ಚಂದ್ರಭಾಗಮ್ಮನೊಂದಿಗೆ ಬೆಂಗಳೂರಿಗೆ ಬಂದರು. ಅನಂತನು ಅವಳ ಕಾಲಿಗೆರಗಿ, ಅವಳನ್ನು ಮೋಸಗೊಳಿಸಿದುದಕ್ಕಾಗಿ ತನ್ನನ್ನು ಕ್ಷಮಿಸಬೇಕೆಂದೂ ತನ್ನ ಸರ್ವಾಪರಾಧಗಳನ್ನೂ ಮನ್ನಿಸಿ, ಸೀತೆಯ ಆರೈಕೆಯನ್ನು ಅವಳು ನೋಡಿಕೊಳ್ಳಬೇಕೆಂದೂ ಬೇಡಿಕೊಂಡ. ತಂದೆ ಮಗಂದಿರ ನಿಸ್ವಾರ್ಥ ಬುದ್ಧಿಗೆ ಚಂದ್ರಭಾಗಮ್ಮನು ತಲೆದೂಗಿ, ಅವರೆಂದಂತೆ ನಡೆಯಲು ತಾನು ಸಿದ್ಧಳಿದ್ದೇನೆಂಬುದಾಗಿ ಹೇಳಿದಳು.

ಗೋಪಾಲರಾಯರು ಉಡುಪಿಗೆ ಹಿಂದಿರುಗಿದರು.

## ೨೧

ಅನಂತನು ಸಾಹಿತ್ಯ ಪ್ರೇಮಿ. ಅವನು ಆಂಧ್ರದೇಶದಲ್ಲೆ ಬಳೆದಿದ್ದುದರಿಂದ ತೆಲುಗು ಸಾಹಿತ್ಯದಲ್ಲಿ ಚೆನ್ನಾಗಿ ನುರಿತಿದ್ದ. ಅವನ ಶೈಲಿಯನ್ನು ದೊಡ್ಡ ದೊಡ್ಡ ತೆಲುಗು ವಿದ್ವಾಂಸರು ಹೊಗಳಿದ್ದರು.

ಬಿ. ಎಲ್. ಮುಗಿದ ಮೇಲೆ, ಎಡ್ವೊಕೇಟ್ ಆಗಿ, ಉಡುಪಿಯಲ್ಲಾಗಲಿ ಮಂಗಳೂರಲ್ಲಾಗಲಿ ವಕಾಲತು ನಡೆಸಬೇಕೆಂದು ಅವನು ನಿರ್ಧರಿಸಿದ್ದ. ಆದುದರಿಂದ ಇನ್ನು ಮುಂದೆ ಕನ್ನಡಕ್ಕೆ ಹೆಚ್ಚಿನ ಗಮನ ಕೊಡಬೇಕೆಂದು ನಿಶ್ಚಯಿಸಿ, ಬೆಂಗಳೂರಿನಲ್ಲಿ ಕೈಗೆ ಸಿಕ್ಕಿದ ಕನ್ನಡ ಪುಸ್ತಕಗಳನ್ನೆಲ್ಲಾ ಓದತೊಡಗಿದ.

ಸೀತೆಯು ತುಂಬಾ ಕನ್ನಡ ಪುಸ್ತಕಗಳನ್ನೋದಿದ್ದುದರಿಂದ ಅವನು ಓದಬೇಕಾದ ಅತ್ಯುತ್ತಮ ಕನ್ನಡ ಪುಸ್ತಕಗಳ ಪಟ್ಟಿ ಮಾಡಿಕೊಟ್ಟಳು. ಜೈಮಿನಿಭಾರತವನ್ನು ಎಷ್ಟು ಬಾರಿ ಓದಿದರೂ ಅವನು ತೃಪ್ತನಾಗಲಿಲ್ಲ. ಅವಳ ಸೂಚನೆ ಮೇರೆಗೆ ಮುದ್ದಣಕವಿಪ್ರಣೀತ ರಾಮಾಶ್ವಮೇಧದ ಪ್ರತಿಯೊಂದನ್ನು ಕೊಂಡು, ಓದಿ, ಅವನು ಮನಸೋತ. ಮುದ್ದಣನೆಂದರೆ ಈ ಶತಮಾನದ ಪ್ರಾರಂಭದ ವರೆಗಿದ್ದ ಕುಸ್ತಿಮಾಸ್ತರನೆಂದು ಸೀತೆಯು ಹೇಳಿದಾಗ ಅನಂತನು ನಂಬಲಿಲ್ಲ. ಇಂತಹ ಉತ್ಕೃಷ್ಟ ಗ್ರಂಥವನ್ನು ಆಧುನಿಕ ಕವಿಗಳು ಬರೆಯಲು ಸಮರ್ಥರಲ್ಲವೆಂದು ಅವನ ಭಾವನೆ. ನಂದಳಿಕೆ ಲಕ್ಷ್ಮೀನಾರಾಯಣಪ್ಪನವರ ಕತೆಯನ್ನು ಸೀತೆಯು ತನಗೆ ತಿಳಿದಮಟ್ಟಿಗೆ ವಿವರಿಸಿ ಹೇಳಲು, ಅನಂತನು ಬೆರಗಾಗಿ, ಆ ಕವಿಯ ಅಕಾಲಮೃತ್ಯುವಿಗಾಗಿ ಮರುಗಿದ.

ಆಧುನಿಕ ಕನ್ನಡ ಕಾವ್ಯಗಳು ಅನಂತನಿಗೆ ರುಚಿಸಲಿಲ್ಲ. ಹೊಸ ಛಂದಸ್ಸಿನಲ್ಲಿ ಬರೆ ಕೆಲವರು ಮಾತ್ರ ಬರೆಯಲು ಶಕ್ತರೆಂದೂ ಉಳಿದವರು ಕೇವಲ ಅನುಕರಣಮಾಡುವವರೆಂದೂ ಅವನು ಕಂಡುಹಿಡಿದ.

ಕನ್ನಡದಲ್ಲಿ ಸ್ವತಂತ್ರ ಕಾದಂಬರಿಗಳು ತೀರ ವಿರಳವೆಂದೂ ಬಂಗಾಲಿ ಮರಾಠಿ ಭಾಷೆಗಳ ಕಾದಂಬರಿಗಳ ಅನುವಾದಗಳೆ ಹೆಚ್ಚೆಂದೂ ಕನ್ನಡ ದಲ್ಲಿ ಸ್ವತಂತ್ರ ಕಾದಂಬರಿಗಳು ಹೆಚ್ಚು ಹೆಚ್ಚಾಗಿ ಬರೆಯಲ್ಪಡಬೇಕೆಂದೂ ಎಂದಿಗೆ ಕನ್ನಡ ನಾಡಿನಲ್ಲಿ ಒಬ್ಬ ಬಂಕಿಮಚಂದ್ರನಾಗಲಿ ಶರಚ್ಚಂದ್ರ ನಾಗಲಿ ಹುಟ್ಟುವನೊ, ಅಂದಿಗೆ ಕನ್ನಡಮ್ಮನ ಭಾಗ್ಯೋದಯವಾಗುವು ದೆಂದೂ ಅವನು ಸೀತೆಗೆ ಪದೇ ಪದೇ ಹೇಳುತಿದ್ದ.

ಅವನು ಕನ್ನಡ ಸಾಹಿತ್ಯರಂಗಕ್ಕಿಳಿಯಬೇಕೆಂದು ಸೀತೆಯು ಹುರಿ ದುಂಬಿಸಲು, ತನ್ನಿಂದಾದಷ್ಟು ಪ್ರಯತ್ನಿಸುವೆನೆಂದು ಆಶ್ವಾಸನೆಯಿತ್ತ.

ಅನಂತನು ತೆಲುಗುಭಾಷೆಯಲ್ಲಿ ಒಂದು ಕಾದಂಬರಿ ಬರೆಯುತಿದ್ದ. ಪ್ರಾರಂಭಿಸಿ ಎರಡು ಮೂರು ವರ್ಷಗಳಾದರೂ, ಅವನು ಅದನ್ನು ಮುಗಿ ಸಿರಲಿಲ್ಲ. ಸಮಯ ಸಿಕ್ಕಿದಾಗ ಅವನು ಅದನ್ನು ಮುಂದುವರಿಸಿ ಮುಗಿ ಸಿದ. ಅದನ್ನು ಕನ್ನಡಕ್ಕೆ ಪರಿವರ್ತಿಸಿ ಸೀತೆಗೆ ಓದಿಹೇಳಿದ. ಅದು ಅವನ ಸ್ವಕಪೋಲಕಲ್ಪಿತವೆಂಬುದನ್ನು ಕೇಳಿಯಂತೂ ಸೀತೆಯ ಸಂತೋಷಕ್ಕೆ ಪಾರವಿಲ್ಲವಾಯಿತು? ಅವನ ಕನ್ನಡ ಶೈಲಿಯಲ್ಲಿ ನ್ಯೂನಾತಿರೇಕಗಳನ್ನು ಕಂಡುಹಿಡಿಯಲು ಅವಳಿಂದಾಗಲಿಲ್ಲ. ಅದು ಕನ್ನಡ ವಿದ್ವಾನರ ಶೈಲಿ ಯಂತಿದೆಯೆಂದು ಅವಳು ಪ್ರಶಸ್ತಿಪತ್ರಿಕೆ ಕೊಟ್ಟಳು. ಕನ್ನಡ ಸಾಹಿತ್ಯ ದೇವಿಯನ್ನು ತನಗೆ ಕಂಡ ರೀತಿಯಲ್ಲಿ ಅಲಂಕರಿಸುವ ಯೋಗ್ಯತೆ ತನ್ನಲ್ಲೂ ಇದೆಯೆಂದು ಅರಿತು ಅನಂತನು ಸುಖಿಯಾದ.

ದಿನ ಹೋದಂತೆ ಸೀತೆಯು ಹೆಚ್ಚು ಹೆಚ್ಚು ಕ್ಷೀಣಳಾದಳು. ಕಣ್ಣು ಗಳು ಗುಳಿಬಿದ್ದುವು; ಮೂಳೆಗಳು ಮೇಲೆದ್ದುವು. ಸಂಕ್ಷೇಪವಾಗಿ ಹೇಳು ವುದಾದರೆ ಅವಳು ಚರ್ಮಹೊದಿಸಿದ ಅಸ್ಥಿಪಂಜರದಂತಾದಳು. ಆಶಾ ವಾದಿಯಾದ ಅನಂತನಿಗೂ ಕೂಡ ಅವಳು ಬದುಕುವ ಹಾಗಿಲ್ಲವೆಂದು ತೋರತೊಡಗಿತು. ಅವಳು ಹಾಸಿಗೆಯಿಂದೇಳದಾದಳು; ಎಲ್ಲವೂ ಮಲಗಿದಲ್ಲೆ!

ಸೀತೆಗೆ ಮರಣದ ಅಂಜಿಕೆಯಿರಲಿಲ್ಲ. ಅವಳ ಮುಖದಲ್ಲಿ ನಿರಂತರವೂ ಮಂದಹಾಸವೆ! ಈ ಒಂದು ವರ್ಷದಿಂದೀಚೆ ಅನಂತನ ಸಹವಾಸವನ್ನು ತನಗೆ ದೊರಕಿಸಿದ ದೇವರನ್ನು ಅವಳು ಕೃತಜ್ಞತೆಯಿಂದ ನಿತ್ಯವೂ ಪ್ರಾರ್ಥಿಸುವಳು. ತಾನು ಸತ್ತಾಗ, ತನ್ನ ವಿಯೋಗವ್ಯಥೆಯನ್ನು ಸಹಿಸುವ ಶಕ್ತಿಯನ್ನು ಅನಂತನಿಗೆ ಕರುಣಿಸಬೇಕೆಂದು ಅವಳು ದೇವರೊಡನೆ ಮೊರೆಯಿಡುವಳು.

ಲೀಲೆಯ ಪತ್ರಗಳು ಆಗಾಗ ಬರುತಿದ್ದುವು. ಕಾವೇರತ್ತೆ ತನ್ನನ್ನು ಮಗಳಿಗಿಂತಲೂ ಹೆಚ್ಚಾಗಿ ಪ್ರೀತಿಸುವರಾದುದರಿಂದ ತನ್ನ ವಿಷಯ ಯಾವ ಯೋಚನೆಯೂ ಬೇಡವೆಂದು ಅವಳು ಬರೆಯುತಿದ್ದಳು. ಇತ್ತೀಚಿನ ಪತ್ರಗಳಲ್ಲಂತೂ, ಎಸ್. ಎಸ್. ಎಲ್. ಸಿ. ಪರೀಕ್ಷೆಗಾಗಿ ತಾನು ಹಗಲಿರುಳು ಓದುತ್ತಿರುವುದಾಗಿ ಬರೆದಿದ್ದಳು. ಮಿತಿ ಮೀರಿ ಓದಬಾರದೆಂದು ಸೀತೆಯು ಪ್ರತ್ಯುತ್ತರ ಬರೆಸಿದಳು.

ಲೀಲೆಯ ಪರೀಕ್ಷೆ ಮುಗಿಯಿತು. ತಾನು ಪರೀಕ್ಷೆಯಲ್ಲಿ ಖಂಡಿತ ಪಾಸಾಗುವೆನೆಂದೂ ಮುಂದೆ ತಾನು ಮಾಡದೇಕಾದುದೇನೆಂದು ತಿಳಿಸಬೇಕೆಂದೂ ಅವಳು ಬರೆದಳು. ಆ ಪತ್ರವನ್ನು ಸೀತೆಯು ಅನಂತನ ಕೈಗಿತ್ತಳು. ಲೀಲೆಯು ಇಂಟರ್ಮೀಡಿಯೇಟಿಗೆ ಹೋಗಬೇಕೆಂದು ಅನಂತನು ಸೂಚಿಸಿದ.

ಸೀತೆಯು ಕಣ್ಣಲ್ಲಿ ನೀರು ತಂದುಕೊಂಡು, "ಇನ್ನು ನಾನು ಲೀಲೆಯನ್ನು ನೋಡುವೆನೊ ಇಲ್ಲವೊ! ಸಾಯಬೇಕಾದರೆ ಒಮ್ಮೆ ಅವಳನ್ನು ನೋಡಬೇಕೆನಿಸುತ್ತದೆ." ಎಂದು ಹೇಳಿ ನಿಟ್ಟುಸಿರಿಟ್ಟಳು.

"ಸೀತೆ, ಸಾಯಲು ನಿನಗೇನಾಗಿದೆ? ಯಾವಾಗಲೂ ಅದೇ ಯೋಚನೆಯನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ."

"ಛೆ! ಛೆ! ಸಾಯಲು ನನಗೇನೂ ಆಗಿಲ್ಲ. ಸ್ವಲ್ಪ ಜ್ವರ ಮಾತ್ರ ಬರುತ್ತದೆ; ಸ್ವಲ್ಪ ಕೆಮ್ಮುತ್ತೇನೆ; ಸ್ವಲ್ಪ ಕಫವೂ ಹೋಗುತ್ತದೆ; ಮೈಯಲ್ಲಿ

ಇನ್ನೂ ಕುಟುಕು ಜೀವವಿದೆ. ಇನ್ನು ಕೆಲವು ದಿನಗಳ ವರೆಗಾದರೂ ನಾನು ಬದುಕಿರುತ್ತೇನೆ."

"ಸೀತೆ, ನೀನೇ ಹೀಗೆ ನಿರಾಶಳಾದರೆ ಸೌಖ್ಯವಾಗುವ ಬಗೆ ಹೇಗೆ? ಇಷ್ಟು ಸಣ್ಣ ಪ್ರಾಯದಲ್ಲಿ ನೀನು ಸಾಯುವುದೆಂದರೇನು! ಮಕ್ಕಳು ಮರಿಗಳನ್ನು ಪಡೆದು, ಮೊಮ್ಮಕ್ಕಳನ್ನೆತ್ತಿ, ಆಡಿಸಿ, ಹಣ್ಣು ಹಣ್ಣು ಮುದುಕಿಯಾಗಿ ಆ ಮೇಲೆ ಸಾಯಬೇಕು. ಲೀಲೆಯನ್ನು ನೋಡಬೇಕೆಂದು ನೀನು ತವಕಪಡುತ್ತೀಯಷ್ಟೆ! ಅವಳ ಪರೀಕ್ಷೆಯಂತೂ ಮುಗಿಯಿತು. ಅವಳನ್ನೂ ಅಮ್ಮನನ್ನೂ ಕೆಲದಿನಗಳ ಮಟ್ಟಿಗೆ ಇಲ್ಲಿಗೆ ಕರೆದುಕೊಂಡು ಬರಬೇಕೆಂದು ತಂದೆಯವರಿಗೆ ಬರೆಯುತ್ತೇನೆ."

---

## ೨೨

ಈಗ ಸೀತೆಯಷ್ಟು ಸುಖಿ ಯಾರೂ ಇಲ್ಲ. ಅವಳ ಪ್ರೀತಿಪಾತ್ರನಾದ ಅನಂತನು ರಾತ್ರಿಹಗಲೆನ್ನದೆ ಅವಳ ಪಕ್ಕದಲ್ಲೆ ಇರುವನು. ಅವಳ ಏಕಮಾತ್ರ ಭಗಿನಿಯು ಬೆಂಗಳೂರಿಗೆ ಬಂದು ಹತ್ತು ಹದಿನೈದು ದಿನಗಳಾದುವು. ಚಂದ್ರಭಾಗಮ್ಮ, ಕಾವೇರಮ್ಮ, ಗೋಪಾಲರಾಯರೂ ಬಳಿಯಲ್ಲೆ ಇರುವರು. ಇನ್ನವಳಿಗಾಗಬೇಕಾದುದೇನು? ಅವಳು ಸಂತೋಷದಿಂದ ಸಾವನ್ನಿದಿರ್ಗೊಳ್ಳಲು ಸಿದ್ಧಳಾದಳು.

ಆ ಅಂತಿಮ ದಿನವೂ ಬಂದೇ ಬಿಟ್ಟಿತು. ತಾನು ಅಂದೇ ಸಾಯುವುದು ಖಂಡಿತವೆಂದು ಸೀತೆಗೆ ಗೊತ್ತಾಯಿತು. ಅವಳಿಂದ ಗಟ್ಟಿಯಾಗಿ ಮಾತನಾಡಲಾಗುತ್ತಿರಲಿಲ್ಲ. ಎಲ್ಲರೂ ಅವಳ ಹಾಸಿಗೆಯ ಸುತ್ತಲೂ ಸೇರಿ ಕಣ್ಣೀರಿಡುತಿದ್ದರು.

ಸೀತೆಯು ಗೋಪಾಲರಾಯರ ಕಡೆನೋಡಿ ತುಟಿಯಲ್ಲಾಡಿಸಿದಳು. ಅವರು ಅವಳ ಬಾಯಿಯ ಹತ್ತಿರ ಕಿವಿಗೊಟ್ಟರು. ತನ್ನ ಮರಣಕ್ಕಾಗಿ

ಅವರಾರೂ ದುಃಖಿಸಬಾರದೆಂದು ಅವಳು ಹೇಳಿದ ಮಾತನ್ನು ಗೋಪಾಲರಾಯರು ಗಟ್ಟಿಯಾಗಿ ಉಚ್ಚರಿಸಿದರು. ಚಂದ್ರಭಾಗಮ್ಮನು ಗೋಳೋ ಎಂದು ಅತ್ತಳು. ಗೋಪಾಲರಾಯರೂ ಕಾವೇರಮ್ಮನೂ ಅವಳನ್ನು ಸಂತೈಸಲು ಬೇರೆ ಕೋಣೆಗೆ ಕರೆದುಕೊಂಡು ಹೋದರು.

ಅವರೆಲ್ಲಾ ಮಾಡಿದ ಉಪಕಾರಕ್ಕೆ ತಾನು ಕೃತಜ್ಞಳಾಗಿರುವೆನೆಂದು ಸೀತೆಯು ಗೋಪಾಲರಾಯರ ಕಿವಿಯಲ್ಲಿ ಹೇಳಿದಳು. ಅವರು ಅಲ್ಲಿಂದೆದ್ದು ಹೋಗಿ, ಮುಖವನ್ನು ಕೈಯಿಂದ ಮುಚ್ಚಿಕೊಂಡು ಕಣ್ಣೀರಿಟ್ಟರು.

ಸೀತೆಯು ಅದೇ ರೀತಿ ಕಾವೇರಮ್ಮನ ಕಿವಿಯಲ್ಲೂ ಹೇಳಿದಳು. ಕಾವೇರಮ್ಮನು ಚಂದ್ರಭಾಗಮ್ಮನನ್ನು ಕರೆತಂದಳು. ಸೀತೆಯು ತಾಯಿಯ ಕಿವಿಯಲ್ಲಿ, "ಅಮ್ಮಾ, ನನ್ನನ್ನು ಹೊತ್ತು ಹೆತ್ತು ಸಲಹಿದೆ. ಈಗ ಸಂತೋಷದಿಂದ ನನ್ನನ್ನು ಹೋಗಗೊಡಮ್ಮಾ" ಎಂದಳು. ಚಂದ್ರಭಾಗಮ್ಮನು ಅಲ್ಲೇ ಕುಸಿಬಿದ್ದಳು. ಅವಳನ್ನೆತ್ತಿ ಬೇರೆ ಕೋಣೆಗೊಯ್ದರು.

ಸೀತೆಯು ಕಣ್ಸನ್ನೆಯಿಂದ ಲೀಲೆಯನ್ನು ಕರೆದು, ಅವಳ ಕಿವಿಯಲ್ಲಿ, "ಲೀಲೆ, ನಿನಗೆ ಯೋಗ್ಯನಾದ ಪತಿಯು ಸಿಕ್ಕಿ ಸುಖದಿಂದಿರು" ಎಂದು ಆಶೀರ್ವದಿಸಿದಳು.

ವಧಸ್ಥಾನಕ್ಕೊಯ್ಯಲ್ಪಡುವ ತಪ್ಪಿತಸ್ಥನಂತೆ ಅನಂತನು ಮೆಲ್ಲ ಮೆಲ್ಲನೆ ಮುಂದೆ ಬಂದು ಸೀತೆಯ ಮುಖದ ಬಳಿ ಕಿವಿಗೊಟ್ಟ. "ಇನ್ನಾದರೂ ಕೆಟ್ಟ ಕನಸಿನಂತೆ ನನ್ನನ್ನು ಮರೆತುಬಿಡಿ. ಜನ್ಮ ಜನ್ಮದಲ್ಲೂ ನೀವೇ ಪತಿಯಾಗುವಂತೆ ದೇವರು ಕರುಣಿಸಲಿ!" ಎಂದು ಹೇಳಿ ಸೀತೆಯು ಅಲ್ಲಿದ್ದೆಲ್ಲರ ಮುಖವನ್ನೂ ನೋಡಿದಳು. 'ತಾನಿನ್ನು ಹೋಗಿಬರಲೆ?' ಎಂಬ ಪ್ರಶ್ನೆಯು ಅವಳ ದೃಷ್ಟಿಯಲ್ಲಿದ್ದಂತೆ ಎಲ್ಲರಿಗೂ ತೋರಿತು. ಸೀತೆಯು ತಲೆಯನ್ನು ಕೊಂಚ ಮೇಲೆತ್ತಿದಳು; ಉತ್ತರ ಕ್ಷಣದಲ್ಲೆ ತಲೆಯು ಯಥಾ

ಸ್ಥಾನಕ್ಕೆ ಮರಳಿತು. ಸೀತೆಯು ನಿಶ್ಚೇಷ್ಟಿತೆಯಾದುದನ್ನು ಕಂಡು, ಎಲ್ಲವೂ ಮುಗಿಯಿತೆಂದು ಗೋಪಾಲರಾಯರು ಗಂಭೀರವಾಕ್ಯದಿಂದ ಹೇಳಿದರು.

ಸೀತೆಯ ಮೃತದೇಹವನ್ನು ನೋಡಿದರೆ, ಅವಳು ಸತ್ತಳೆಂದು ಹೇಳುವಂತಿರಲಿಲ್ಲ. ಅವಳ ಮುಖದಲ್ಲಿ ಮಂದಹಾಸವಿತ್ತು. ಸುಖನಿದ್ರೆಯಲ್ಲಿರುವ ಮಗುವಿನಂತೆ ಅವಳು ಕಂಗೊಳಿಸುತಿದ್ದಳು.

ಅನಂತನು ಅವಳ ಕಳೇಬರದ ಬಳಿಯಲ್ಲೆ ನೀರವವಾಗಿ ಕುಳಿತುಕೊಂಡಿದ್ದ. ಅವನ ಆಶೆ, ಆಕಾಂಕ್ಷೆಗಳೆಲ್ಲವೂ ಮಣ್ಣುಗೂಡಿದ್ದುವು; ಗಾಳಿಗೋಪುರಗಳು ಕುಸಿದು ಬಿದ್ದಿದ್ದುವು.

ಅನಂತನು ಅಲ್ಲೆ ಗಂಟೆಗಟ್ಟಲೆ ಸುಮ್ಮನೆ ಕುಳಿತಿದ್ದುದನ್ನು ನೋಡಿ ಗೋಪಾಲರಾಯರು ಅವನ ಬಳಿ ಬಂದು, ಮೆಲ್ಲನೆ ಅವನ ಭುಜವನ್ನು ಮುಟ್ಟಿದರು. ಅನಂತನು ಮೆಟ್ಟಿಬಿದ್ದಂತಾಗಿ, ಎದ್ದು ನಿಂತು, ದೀನವದನನಾಗಿ ಗೋಪಾಲರಾಯರನ್ನೆ ನೋಡತೊಡಗಿದ. ಅವರು ಕನಿಕರದ ದನಿಯಿಂದ, "ಮಗೂ, ಇನ್ನು ಚಿಂತಿಸುತ್ತ ಕುಳಿತು ಫಲವಿಲ್ಲ. ನಾವು ನಮ್ಮಿಂದ ಸಾಧ್ಯವಿದ್ದುದೆಲ್ಲವನ್ನೂ ಮಾಡಿರುವೆವು. ಅವಳು ಬದುಕಬಾರದೆಂದು ದೈವೇಚ್ಛೆಯಿದ್ದುದಾದರೆ ನಾವೇನು ಮಾಡಿದರೇನು? ಇನ್ನು ಅಗ್ನಿಸಂಸ್ಕಾರಾದಿಗಳನ್ನು ಮಾಡಿಸೋಣ. ಎದ್ದೇಳು." ಎಂದರು.

ಅನಂತನು ಯಂತ್ರದಂತೆ ಗೋಪಾಲರಾಯರ ಹಿಂದೆ ನಡೆದ. ಅಗ್ನಿಸಂಸ್ಕಾರಾದಿ ಕಾರ್ಯಗಳು ಯಥಾವಿಧಿಯಾಗಿ ನೆರವೇರಿಸಲ್ಪಟ್ಟುವು.

ಮರುದಿನವೆ ಅವರು ಉಡುಪಿಗೆ ಹಿಂದಿರುಗುವುದೆಂದು ನಿಶ್ಚಯಿಸಿದರು. ಆದರೆ, ಚಂದ್ರಭಾಗಮ್ಮನಿಗೆ ಸ್ವಲ್ಪ ಜ್ವರ ಬಂದುದರಿಂದ ಪ್ರಯಾಣವನ್ನು ಒಂದು ದಿನ ಮುಂದುವರಿಸಬೇಕಾಯಿತು.

ಅನಂತನು ಇಡಿ ದಿನ ನಿಶ್ಚಲನಾಗಿ ಕುಳಿತು, ಯೋಚನಾಮಗ್ನನಾಗಿದ್ದ. ಅವನಿಗೆ ಹಸಿವು ನೀರಡಿಕೆಗಳ ಪರಿವೆಯಿರಲಿಲ್ಲ. ಹಿರಿಯರ

ಒತ್ತಾಯಕ್ಕಾಗಿ ಊಟಕ್ಕೆ ಕುಳಿತು, ಒಂದು ತುತ್ತು ಉಣ್ಣುತಿದ್ದ. ಯಾರೊಡನೆಯೂ ಮಾತಾಡುತ್ತಿರಲಿಲ್ಲ! ಇತರರಾರಾದರೂ ಮಾತಾಡಿಸಿದರೆ, ಬರೆ ಒಂದೆರಡು ಮಾತುಗಳಲ್ಲೆ ಸಂಭಾಷಣೆಯನ್ನು ಮುಗಿಸುತಿದ್ದ.

ಈ ದುಃಖವನ್ನು ಅನಂತನು ಚೆನ್ನಾಗಿ ಮನಸ್ಸಿಗೆ ಹಚ್ಚಿಕೊಂಡಿರುವನೆಂದು ಗೋಪಾಲರಾಯರು ತಿಳಿದು, ಅವನನ್ನು ಸಮಾಧಾನಗೊಳಿಸಲು ಯತ್ನಿಸಿದರು. ಅನಂತನು ಅವರಿದಿರು ಸಮಾಧಾನಪಟ್ಟಂತೆ ನಟಿಸಿದ. ಕಾಲಕ್ರಮೇಣ ಅವನ ದುಃಖವು ಕಡಿಮೆಯಾಗುವುದೆಂದು ಭಾವಿಸಿ, ಗೋಪಾಲರಾಯರು ಸುಮ್ಮನಾದರು.

ಮರುದಿನ ಬೆಳಗ್ಗೆ ಅನಂತನು ಹಾಸಿಗೆಯಲ್ಲಿರಲಿಲ್ಲ. ಮನೆಯಲ್ಲೆಲ್ಲೂ ಅವನು ಕಾಣದಿದ್ದುದನ್ನು ನೋಡಿ ಎಲ್ಲರೂ ಗಾಬರಿಗೊಂಡರು. ಅವನ ಹಾಸಿಗೆಯಲ್ಲಿ ಒಂದು ಪತ್ರ ಸಿಕ್ಕಿತು. ಅವರೆಲ್ಲರೊಡನೆ ಹೇಳದೆ ತಾನು ಹೋದುದಕ್ಕೆ ತನ್ನನ್ನು ಕ್ಷಮಿಸಬೇಕಾಗಿಯೂ ಸೀತಾವಿಯೋಗದ ದುಃಖವನ್ನು ತನ್ನಿಂದ ಸಹಿಸಲಾಗುವುದಿಲ್ಲವಾಗಿಯೂ ಈಗ ಉಡುಪಿಗೆ ಹೋದರೆ, ಅಲ್ಲಿ ಸೀತೆಯೊಂದಿಗೆ ಹಿಂದೆ ತಾನು ಕಳೆದ ಸುಖದ ದಿನಗಳ ನೆನಪಾಗಿ ಜೀವನವು ದುಸ್ಸಹವಾಗುವುದಾಗಿಯೂ ತಾನು ಊರೂರು ತಿರುಗಿ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ, ದೈವಸಂಕಲ್ಪವಿದ್ದರೆ ಊರಿಗೆ ಹಿಂದಿರುಗುವುದಾಗಿಯೂ ತನ್ನನ್ನು ಹುಡುಕಿಸುವ ಗೊಡವೆಗೆ ಯಾರೂ ಹೋಗಬಾರದಾಗಿಯೂ ಆ ಪತ್ರದಲ್ಲಿ ಉಲ್ಲೇಖಿಸಿದ್ದ.

ಕಾವೇರಮ್ಮನು ಕಣ್ಣೀರಿಡತೊಡಗಿದಳು. ಅನಂತನು ಸಣ್ಣ ಮಗುವಲ್ಲವೆಂದೂ ದುಃಖದ ಆವೇಗವು ಕಡಿಮೆಯಾದೊಡನೆ ಅವನು ಊರಿಗೆ ಬಂದೇ ಬರುವನೆಂದೂ ಹೇಳಿ ಗೋಪಾಲರಾಯರು ಅವಳನ್ನು ಸಮಾಧಾನಗೊಳಿಸಿದರು.

## ೨೩

ಗೋಪಾಲರಾಯರು ಕಾವೇರಮ್ಮ, ಚಂದ್ರಭಾಗಮ್ಮ, ಲೀಲೆಯರೊಂದಿಗೆ ಹೊರಟು ತಿರುಪತಿಗೆ ಹೋದರು. ಆ ಪುಣ್ಯಕ್ಷೇತ್ರದಲ್ಲಿ ತಾನು ಮುಂಡನ ಮಾಡಿಸಿಕೊಳ್ಳುವೆನೆಂಬುದಾಗಿ ಚಂದ್ರಭಾಗಮ್ಮನು ತಿಳಿಸಿದಳು. ಅವಳ ಮನಸ್ಸನ್ನು ತಿರುಗಿಸಲು ಗೋಪಾಲರಾಯರೂ ಕಾವೇರಮ್ಮನೂ ಪ್ರಯತ್ನಿಸಿ ನಿಷ್ಫಲರಾದರು. ಚಂದ್ರಭಾಗಮ್ಮನು ತನ್ನ ಹಟಸಾಧಿಸಿ, 'ಶುದ್ಧ'ಳಾದಳು; ಅಲ್ಲದೆ, ಪುತ್ರೀವಿಯೋಗ ದುಃಖವನ್ನೂ ಕ್ರಮೇಣ ಮರೆತುಬಿಟ್ಟಳು. ಅನಂತನ ಯೋಚನೆಯಿಂದ ಕಂಗೆಟ್ಟಿದ್ದ ಕಾವೇರಮ್ಮನನ್ನು ಚಂದ್ರಭಾಗಮ್ಮನು ಸಮಾಧಾನಗೊಳಿಸತೊಡಗಿದಳು.

ಅವರು ಉಡುಪಿಗೆ ಬಂದ ಒಂದೆರಡು ದಿನಗಳಲ್ಲೆ ಬೊಂಬಾಯಿಯಿಂದ ಅನಂತನ ಪತ್ರ ಬಂದಿತು. ಅದನ್ನು ನೋಡಿ, ಕಾವೇರಮ್ಮನಿಗೆ ಒಮ್ಮೆ ಜೀವ ಬಂದಂತಾಯಿತು. ತಾನು ತನ್ನ ಹಿಂದಿನ ಸಹಪಾಠಿಯೊಬ್ಬನೊಂದಿಗೆ ಸೌಖ್ಯವಾಗಿದ್ದೇನೆಂದೂ ಒಂದು ನೂರು ರೂಪಾಯಿ ಕೂಡಲೆ ಕಳುಹಿಸಬೇಕೆಂದೂ ಅನಂತನು ಬರೆದಿದ್ದ. ಗೋಪಾಲರಾಯರು ಮರುದಿನವೆ ರೂಪಾಯಿ ಕಳುಹಿಸಿದರು; ಅವನು ತ್ವರ್ಯದಲ್ಲೆ ಹೊರಟು ಬರಬೇಕೆಂದು ಪತ್ರವನ್ನೂ ಬರೆದರು.

ಅನಂತನು ಉಡುಪಿಗೆ ಬರಲೂ ಇಲ್ಲ; ಪ್ರತ್ಯುತ್ತರ ಬರೆಯುವ ಗೋಜಿಗೆ ಹೋಗಲೂ ಇಲ್ಲ.

ಒಂದು ತಿಂಗಳ ಮೇಲೆ ಕಾಶಿಯಿಂದ ಅವನ ಪತ್ರಬಂದಿತು. ತಾನು ವಿಶ್ವೇಶ್ವರನ ದರ್ಶನ ಪಡೆದೆನೆಂದೂ ನೂರು ರೂಪಾಯಿ ಕಳುಹಿಸಬೇಕೆಂದೂ ಬರೆದಿದ್ದ. ಅವನು ಹಿಂತಿರುಗಿ ಬರಬೇಕೆಂದೂ ವೃದ್ಧಾಪ್ಯದಲ್ಲಿ ತಮ್ಮನ್ನು ಚಿಂತೆಗೀಡುಮಾಡಬಾರದೆಂದೂ, ಕಾವೇರಮ್ಮನು ಕರುಣಾಜನಕವಾದ ಪತ್ರ ಬರೆದಳು. ಗೋಪಾಲರಾಯರು ಆ ಪತ್ರವನ್ನು ಹಣದೊಂದಿಗೆ ಕಳುಹಿಸಿದರು.

ಹಣಕ್ಕಾಗಿ ಅನಂತನು ಆಗಾಗ ಪತ್ರಬರೆಯುತಿದ್ದ. ಇದರಿಂದಾಗಿ ಅವನು ಇಂತಹ ಸ್ಥಳದಲ್ಲಿ ಇರುವನೆಂಬುದು ಮನೆಯವರಿಗೆ ತಿಳಿಯುತಿದ್ದಿತು. ಅವರು ಬರೆದ ಪತ್ರಕ್ಕೆ ಪ್ರತ್ಯುತ್ತರ ಮಾತ್ರ ಬರುತ್ತಿರಲಿಲ್ಲ. ಅವನು ಪರದೇಶದಲ್ಲಿ ಸಂಕಟಪಡಬಾರದೆಂದು, ಕೇಳಿದುದಕ್ಕಿಂತಲೂ ಹೆಚ್ಚಿನ ಹಣವನ್ನು ಗೋಪಾಲರಾಯರು ಕಳುಹಿಸುತಿದ್ದರು.

ಗೋಪಾಲರಾಯರ ಆಗ್ರಹದ ಮೇರೆಗೆ ಚಂದ್ರಭಾಗಮ್ಮನು ತನ್ನ ಮನೆಯನ್ನು ಬಾಡಿಗೆಗೆ ಕೊಟ್ಟು, ಲೀಲೆಯೊಂದಿಗೆ ಗೋಪಾಲರಾಯರಲ್ಲಿ ಇರತೊಡಗಿದ್ದಳು. ಲೀಲೆಯು ಇಂಟರ್ಮೀಡಿಯೇಟ್ ಕಲಿಯಲಿಕ್ಕಾಗಿ ಮಂಗಳೂರಿಗೆ ಹೋಗಿದ್ದವಳು ಬೇಸಿಗೆಯ ರಜೆಯಲ್ಲಿ ಉಡುಪಿಗೆ ಬಂದಿದ್ದಳು.

ಎಲ್ಲರಿಗೂ ಸೀತೆಯ ನೆನಪು ಆಗಾಗ ಆಗುತಿದ್ದರೂ ದುಃಖದ ಆವೇಗವು ಮುಗಿದಿತ್ತು. ಚಂದ್ರಭಾಗಮ್ಮನು ಮಾತ್ರ ಸೀತೆಯ ಹೆಸರನ್ನೆತ್ತುತಿರಲಿಲ್ಲ. ಸೀತೆಯ ಸಂಗತಿ ಮಾತನಾಡುವಾಗ 'ಅವಳು' 'ಅವಳು' ಎಂಬ ಶಬ್ದವನ್ನು ಉಪಯೋಗಿಸುತಿದ್ದಳೇ ವಿನಾ 'ಸೀತೆ' ಎಂದು ಅವಳೆಂದೂ ಹೇಳುತ್ತಿರಲಿಲ್ಲ. ಸೀತೆಯ ಗುಣಗಾನ ಮಾಡುವುದರಿಂದ ಅವಳಿಗೆ ಒಂದು ಬಗೆಯ ಆನಂದವುಂಟಾಗುತಿತ್ತು. ಪ್ರಿಯರಾದವರು ಸತ್ತಾಗ, ಆ ದುಃಖವನ್ನು ಹೇಗೆ ಸಹಿಸುವುದೆಂದು ತೋರದೆ ಕಂಗಾಲಾಗುವೆವು; ಆದರೆ, ದಿನಗಳೆದಂತೆ, ನಮ್ಮ ದುಃಖವ್ರಣವು ಮಾಯವಾಗಿ, ನಾವು, ಸತ್ತು ಹೋದ ನಮ್ಮ ಪ್ರೀತಿಪಾತ್ರರ ಸದ್ಗುಣಾವಳಿಯನ್ನು ನೆನೆನೆನೆದು, ಅವರ್ಣನೀಯವಾದ ಒಂದು ಅಪೂರ್ವ ಸಂತೋಷವನ್ನನುಭವಿಸುವುದಿಲ್ಲವೇ!

---

## ೨೪

ಒಂದು ದಿನ ಸಾಯಂಕಾಲ ಕಾವೇರಮ್ಮನೊಬ್ಬಳೆ ಮನೆಯಲ್ಲಿದ್ದಳು. ಗೋಪಾಲರಾಯರು ಎಂದಿನಂತೆ ಇತರ ಪೆನ್ಶನರರೊಂದಿಗೆ ತಿರುಗಾಟಕ್ಕೆ

ಹೋಗಿದ್ದರು. ಚಂದ್ರಭಾಗಮ್ಮನು ಪುರಾಣಶ್ರವಣಕ್ಕೆಂದು ದೇವಸ್ಥಾನಕ್ಕೆ ಸಾಗಿದ್ದಳು. ಮರುದಿನ ಮಂಗಳೂರಿಗೆ ಹೋಗಬೇಕಾಗಿದ್ದುದರಿಂದ ತನ್ನ ಮಿತ್ರೆಯರನ್ನೆಲ್ಲಾ ಒಮ್ಮೆ ಕಂಡುಬರಬೇಕೆಂದು ಲೀಲೆಯೂ ಹೋಗಿದ್ದಳು.

ಅನಂತನ ಪತ್ರವಿಲ್ಲದೆ ತಿಂಗಳೆರಡಾಗಿತ್ತು. ಅವನೆಲ್ಲಿರುವನು, ಹೇಗಿರುವನು, ಎಂಬುದನ್ನು ತಿಳಿಯದೆ ಕಾವೇರಮ್ಮನು ಕಂಗೆಟ್ಟಿದ್ದಳು. ಅವನ ಯೋಚನೆಯಿಂದ ಅವಳು ಸೊರಗಿ ಕಡ್ಡಿಯಂತಾಗಿದ್ದಳು. ಅವಳು ದೇವರ ಕೋಣೆಗೆ ಹೋಗಿ, ಪರಮಾತ್ಮನನ್ನು ಭಕ್ತಿಭಾವದಿಂದ ಪ್ರಾರ್ಥಿಸಿದಳು. "ಭಕ್ತ ವತ್ಸಲಾ, ನಮ್ಮನ್ನು ಇಷ್ಟು ಪರೀಕ್ಷಿಸಿದುದು ಸಾಲದೆ? ಅನಂತನು ನಮ್ಮನ್ನು ಬಿಟ್ಟುಹೋಗಿ ವರ್ಷಕ್ಕೆ ಮೇಲಾಯಿತು. ನನ್ನ ಮಗುವು ಪರದೇಶದಲ್ಲಿ ಪರದೇಶಿಯಾಗಿ ಅಲೆಯುತ್ತಿರುವಾಗ, ನಾನಿಲ್ಲಿ ಸುಖದಿಂದಿರಲೆ? ಅವನ ಮುದ್ದು ಮೊಗವನ್ನೊಮ್ಮೆ ನೋಡಲು ನಾನು ಕಾತರಳಾಗಿರುವೆನು. ದೇವಾ, ಅವನು ಅನುದಿನವೂ ನನ್ನ ಬಳಿಯಲ್ಲೆ ಇರಬೇಕೆಂದು ನಾನು ಹೇಳುವವಳಲ್ಲ! ಅವನು ಎಲ್ಲಿ ಬೇಕಾದರೂ ಇರಲಿ; ಅವನು ಸುಖದಿಂದಿದ್ದರೆ ಸಾಕು. ಇದಿಷ್ಟೆ ನಿನ್ನೊಡನೆ ನಾನು ಪ್ರಾರ್ಥಿಸುತ್ತಿರುವುದು." ಅವಳ ಕಂಗಳಿಂದ ಭಕ್ತಿಪ್ರವಾಹವು ಹರಿಯಿತು; ದೇವರ ಧ್ಯಾನದಲ್ಲಿ ಅವಳು ಎಲ್ಲವನ್ನೂ ಮರೆತಳು.

ಹೊರಗಣಿಂದ 'ಅಮ್ಮಾ' 'ಅಮ್ಮಾ' ಎಂದು ಮೇಲಿಂದ ಮೇಲೆ ಕರೆದುದು ಕಿವಿಗೆ ಬಿದ್ದ ಕೂಡಲೆ, ಅವಳು ಎಚ್ಚತ್ತು ಹೊರಗೆ ಬಂದು, ಬಾಗಿಲು ತೆರೆದಳು. ತನ್ನ ಪ್ರಾರ್ಥನೆಯನ್ನು ದೇವರು ಅಷ್ಟು ಬೇಗನೆ ಕರುಣಿಸಬಲ್ಲನೆಂದು ಅವಳು ತಿಳಿದಿರಲಿಲ್ಲ. ಬಾಗಿಲು ತೆರೆಯುತ್ತಲೆ ಅನಂತನು ಒಳಗೆ ಬಂದು, ಉದ್ದಂಡಪ್ರಣಾಮ ಮಾಡಲು, ಅವಳು ಸಂತೋಷದಿಂದ ಅವನನ್ನೆತ್ತಿ ಎದೆಗವಚಿಕೊಂಡಳು.

ಊರೂರು ಅಲೆದುದರಿಂದ ಅನಂತನು ಸ್ವಲ್ಪ ಸೊರಗಿದ್ದ. ತನ್ನ ಮಗನನ್ನು ಕ್ಷೇಮದಿಂದ ಮನೆಗೆ ಬರಗೊಟ್ಟ ಪರಮಾತ್ಮನನ್ನು

ಕಾವೇರಮ್ಮನು ಪುನಃ ಪುನಃ ಕೊಂಡಾಡಿ, ಕೈಕಾಲು ತೊಳೆದುಕೊಂಡು ಬರುವಂತೆ ಹೇಳಿ, ಕಾಫಿ ಮಾಡಲು ಅಡುಗೆಕೋಣೆಗೆ ಹೋದಳು.

ಲೀಲೆಯು ಮನೆಗೆ ಹಿಂದಿರುಗಿ, "ಕಾವೇರತ್ತೆ, ನಾನು ವೆಂಕಟ್ರಾಯರ ಮನೆಗೆ ಹೋಗಿದ್ದೆ. ಸಾವಿತ್ರಿಯು ನಿನ್ನೆ ಗಂಡನೊಂದಿಗೆ ಬೊಂಬಾಯಿಯಿಂದ ಬಂದಿರುವಳು. ಮೊದಲೆ ಸುಂದರಿಯಾದ ಸಾವಿತ್ರಿ ಈಗ ರತೀದೇವಿಯ ಹಾಗಾಗಿದ್ದಾಳೆ. ಎರಡು ತಿಂಗಳ ಗರ್ಭಿಣಿಯಂತೆ! ಅವಳ ತಾಯಿ ಹೇಳಿದಳು. ನಾನು 'ಅಹುದೊ?' ಎಂದು ಸಾವಿತ್ರಿಯನ್ನು ಕೇಳಲು ಲಜ್ಜೆಯಿಂದ, 'ಇಲ್ಲ, ಇಲ್ಲ, ಎಲ್ಲಾ ಸುಳ್ಳು!' ಎಂದು ಹೇಳಿದಳು. ನೀವು ನಾಳೆ ಅಲ್ಲಿಗೆ ಬರಬೇಕಂತೆ. ಎಷ್ಟು ಮಾತ್ರಕ್ಕೂ ಬಾರದಿರಬಾರದಂತೆ. ಸಾವಿತ್ರಿಯೂ ಅವಳ ಗಂಡ............" ಎಂದು ಹೇಳುವಷ್ಟರಲ್ಲೆ, ಕಾಲು ತೊಳೆದುಕೊಂಡು ಬಂದ ಅನಂತನು ಅವಳ ಧ್ವನಿಯನ್ನು ಕೇಳಿ, ಅವಳನ್ನು ನೋಡಿ, 'ಹಾ, ಸೀತೆ!' ಎಂದು ಕೂಗಿ, ನಿಶ್ಚೇಷ್ಟಿತನಾಗಿ ದೊಪ್ಪನೆ ಬಿದ್ದುಬಿಟ್ಟ.

ಲೀಲೆಯು ಕೂಡಲೆ ಅವನು ಬಿದ್ದಲ್ಲಿಗೆ ಹೋಗಿ, ಅವನ ತಲೆಯನ್ನು ತನ್ನ ತೊಡೆಯ ಮೇಲಿರಿಸಿಕೊಂಡು, ಸೆರಗಿನಿಂದ ಗಾಳಿ ಬೀಸತೊಡಗಿದಳು. ಕಾವೇರಮ್ಮನು ಓಡಿ ಬಂದು, ತಣ್ಣೀರನ್ನು ಅವನ ಮೇಲೆ ಎರಚಿದಳು. ಅನಂತನಿಗೆ ಪೆಟ್ಟೇನೂ ಆಗಿರಲಿಲ್ಲ. ಅವನು ಮೆಲ್ಲಮೆಲ್ಲನೆ ಎಚ್ಚರಗೊಳ್ಳುವುದನ್ನು ನೋಡಿ, ಕಾವೇರಮ್ಮನು ಬೀಸಣಿಗೆ ತರಲೆಂದು ಒಳಗೆ ಹೋದಳು.

ಅನಂತನು ಕಣ್ದೆರೆದ. ಲೀಲೆಯು "ಭಾವಯ್ಯಾ, ನೀನು ಯಾವಾಗ ಬಂದೆ? ನಮಗೇಕೆ ಎರಡು ತಿಂಗಳಿಂದಲೂ ಬರೆಯಲಿಲ್ಲ? ಈಗ ನಿನಗೆ ನಮ್ಮಕ್ಕನ ನೆನಪಾಗಿ ಮೈಮರೆತೆಯಾ?" ಎಂದು ಮೃದುವಾಗಿ ಕೇಳಿದಳು.

ಅನಂತನು ಲೀಲೆಯ ಕೈಯನ್ನು ಹಿಡಿದುಕೊಂಡು, "ಲೀಲೆ, ನಿನ್ನನ್ನು ನಾನು ಸೀತೆಯೆಂದೆ ಭಾವಿಸಿ ಭ್ರಾಂತನಾದೆ! ಲೀಲೆ, ನಿನ್ನಕ್ಕನೆಷ್ಟು

ಒಳ್ಳೆಯವಳೆ! ಅವಳು ನಮ್ಮನ್ನು ತೊರೆದು ಹೋಗಿಯೆ ಬಿಟ್ಟಳಲ್ಲವೆ!" ಎಂದು ಹೇಳಿ, ಮಗುವಿನಂತೆ ಅಳತೊಡಗಿದ.

ಕಾವೇರಮ್ಮನು ಬೀಸಣಿಗೆಯನ್ನು ತಂದಿಟ್ಟು, ಮಂದಸ್ಮಿತವದನೆಯಾಗಿ ಒಳಗೆ ಹೋದಳು.

"ಭಾವಯ್ಯಾ, ಆ ವಿಷಯವನ್ನು ಕುರಿತು ಇನ್ನು ಚಿಂತಿಸಿ ಫಲವೇನು? ನಮ್ಮ ಪೂರ್ವಜನ್ಮದ ಪಾಪವಿಶೇಷದಿಂದಿರಬಹುದು; ಅವಳನ್ನು ನಮ್ಮಿಂದ ಉಳಿಸಿಕೊಳ್ಳಲಾಗಲಿಲ್ಲ. ಭಾವಯ್ಯಾ, ಅಂದು ನಮ್ಮನ್ನು ಬಿಟ್ಟ ನೀನು ಎಲ್ಲೆಲ್ಲಿಗೆಲ್ಲಾ ಹೋದೆ? ಫಕ್ಕನೆ ಇಲ್ಲಿಗೆ ಹೇಗೆ ಬಂದೆ?" ಲೀಲೆಯು ಪ್ರಶ್ನಿಸಿದಳು.

"ಲೀಲೆ, ಸೀತೆಯ ವಿಯೋಗವ್ಯಥೆಯನ್ನು ತಡೆಯಲಾಗದೆ, ನಾನು ಊರೂರು ಅಲೆದಾಡಿದೆ. ನನ್ನ ಸೀತೆಯನ್ನು ಕೊಂಡೊಯ್ದು, ನನ್ನನ್ನು ಇನ್ನೂ ಜೀವಸಮೇತ ಬಿಟ್ಟಿರುವ ಪರಮಾತ್ಮನನ್ನು ನಾನು ಎಷ್ಟೋ ಸಲ ಶಪಿಸಿರುವೆನು. ಆತ್ಮಹತ್ಯೆ ಮಾಡಿಕೊಳ್ಳಲೆ ಎಂದು ಹಲವು ಬಾರಿ ಯೋಚಿಸಿ, ಹಾಗೆ ಮಾಡುವುದು ಹೇಡಿಯ ಲಕ್ಷಣವೆಂದು ತಿಳಿದು, ಸುಮ್ಮನಾಗಿರುವೆನು. ಆಜೀವವೂ ಬ್ರಹ್ಮಚಾರಿಯಾಗಿ ಲೋಕ ಸೇವೆಯಲ್ಲಿ ಕಾಲಕಳೆಯಬೇಕೆಂದು ನಿಶ್ಚಯಿಸಿದೆ. ಆದರೆ ಸೀತೆಯನ್ನು ಮರೆಯುವುದು ಮಾತ್ರ ನನ್ನಿಂದಾಗದೆ ಹೋಯಿತು. ಆಕೆಯ ಧ್ಯಾನಮಾಡುತ್ತ ಕುಳಿತರೆ, ನನಗೆ ಬೇರಾವುದೂ ಬೇಕೆನಿಸುತ್ತಿರಲಿಲ್ಲ. ತೀರ್ಥಯಾತ್ರೆ ಮಾಡಿದರೆ ಮನಸ್ಸಿಗೆ ಶಾಂತಿ ದೊರೆಯಬಹುದೆಂದು ಭಾವಿಸಿದ್ದೆ. ಆದರೆ ಅಣು-ರೇಣು-ತೃಣ-ಕಾಷ್ಠಗಳಲ್ಲಿಯೂ ತುಂಬಿಕೊಂಡಿರುವ ಪರಮಾತ್ಮನು ನಮ್ಮ ತೀರ್ಥಕ್ಷೇತ್ರಗಳಲ್ಲಿ ಮಾತ್ರ ಇಲ್ಲ! ಧರ್ಮದ ಹೆಸರಿನಲ್ಲಿ ಅತ್ಯಾಚಾರಗಳನ್ನು ಮಾಡಿ, ಹಣ ಸುಲಿಯುವ ಧನಪಿಶಾಚಗ್ರಸ್ತರ ಹಾವಳಿಯನ್ನು ಸಹಿಸಲಾರದೆ ದೇವರು ಎಂದೊ ವೈಕುಂಠಕ್ಕೊ, ಕೈಲಾಸಕ್ಕೊ ಪಲಾಯನಮಾಡಿರುವನು! ಮಧುರೆಯ ಮೀನಾಕ್ಷಿದೇವಾಲಯದಲ್ಲಿ

ಮಾತ್ರ ಜಾತಿಭೇದವಿಲ್ಲದೆ ಎಲ್ಲರೂ ದೇವತಾರಾಧನೆ ಮಾಡುತ್ತಿರುವುದನ್ನು ನೋಡಿ, ನಮ್ಮ ಹಿಂದೂ ಧರ್ಮವು ಇಲ್ಲಿ ಪುನರ್ಜೀವಿತವಾಗುವುದೆಂದು ನನಗೆ ತೋರಿತು. ಅಂದು ನನಗೆ ಮನಶ್ಶಾಂತಿ ದೊರಕಲು, ಸಂತಸದಿಂದ ನಿದ್ರಿಸಿದೆ.

"ಕನಸಿನಲ್ಲಿ ಸೀತೆ ಕಾಣಿಸಿಕೊಂಡಳು. ಅವಳ ಮುಖದಲ್ಲಿ ಹೊಳೆಯುತಿದ್ದ ದಿವ್ಯ ಪ್ರಕಾಶವು ಕಣ್ಣನ್ನು ಕುಕ್ಕುವಂತಿತ್ತು. ಅವಳು ನನ್ನನ್ನು ಕುರಿತು 'ಇಷ್ಟು ತಿರುಗಿದುದು ಸಾಲದೆ? ಇನ್ನೂ ಹೀಗೆ ಎಷ್ಟು ಕಾಲ ಅಲೆಯಬೇಕೆಂದಿದ್ದೀರಿ?' ಎಂದು ಕೇಳಿದಳು. ನಾನು ತಲೆತಗ್ಗಿಸಿ ಸುಮ್ಮನೆ ಕುಳಿತುಕೊಂಡಿದ್ದೆ. ಅವಳು ಮಾತನ್ನು ಮುಂದುವರಿಸಿದಳು. 'ನಿಮ್ಮ ಅಗಲುವಿಕೆಯನ್ನು ಅತ್ತೆಮ್ಮನವರು ಸಹಿಸಲಾರರು. ನೀವು ಅವರಿಗೇಕೆ ತ್ರಾಸಕೊಡುವುದು? ಕೂಡಲೆ ಹಿಂದಿರುಗಿ, ಅವರನ್ನು ಸಂತೈಸಿ, ಮುಂದಿನ ಕರ್ತವ್ಯದಲ್ಲಿ ನಿರತರಾಗಿರಿ.'

"ನನಗೆ ಬದುಕಿನಲ್ಲಿ ಬೇಸರವುಂಟಾಗಿರುವುದರಿಂದ ಹೀಗೆ ಊರೂರು ತಿರುಗುತ್ತಿರುವೆನೆಂದು ಹೇಳಿದೆ.

"ಅವಳು ತಿರಸ್ಕಾರಪೂರ್ವಕವಾಗಿ ನನ್ನ ಕಡೆ ನೋಡಿ, 'ತಿರುಕರಂತೆ ತಿರುಗುವುದರಲ್ಲಿ ಜೀವನದ ಸಾರ್ಥಕತೆಯನ್ನು ಕಾಣುವಿರೇನು?' ಎಂದು ಕೇಳಿದಳು.

"ನಾನೆಂದೆ. 'ಹಾಗಲ್ಲ, ಸೀತೆ. ನೀನು ಸೌಖ್ಯವಾಗಿ, ನನ್ನೊಡನೆ ಸಂಸಾರಮಾಡಿಕೊಂಡಿದ್ದರೆ, ನನ್ನ ಹಿಂದಿನ ಆಶೆ-ಆಕಾಂಕ್ಷೆಗಳೆಲ್ಲವೂ ಸಫಲವಾಗುತಿದ್ದುವು. ನೀನೇ ನನ್ನ ಕೈಬಿಟ್ಟ ಮೇಲೆ ನನಗಿನ್ನೇನಾಗಬೇಕಾಗಿದೆ? ಇನ್ನುಳಿದಿರುವ ಆಯುಷ್ಯವನ್ನು ಹೇಗಾದರೂ ಮುಗಿಸಿದರೆ ಸಾಕಾಗಿದೆ.'

"ಅದಕ್ಕವಳು, 'ಇಸ್ಸಿ! ಎಂತಹ ಹುಚ್ಚು! ಅಲ್ಪಳಾದ ನಾನು ಹೋದ ಮಾತ್ರಕ್ಕೆ ನೀವು ಕರ್ತವ್ಯಪರಾಙ್ಮುಖರಾಗಬಹುದೆ? ಸಮಾಜದಲ್ಲಿ

ಎಷ್ಟೊ ಸುಧಾರಣೆಗಳನ್ನು ತರಲು ಹೆಣಗುವೆನೆಂದು ಹೇಳುತಿದ್ದಿರಿ. ಇಂದು ಅಂಜುಬುರುಕರಂತೆ ಸುಮ್ಮನೆ ಕುಳಿತುಕೊಂಡು ಎಲ್ಲವನ್ನೂ ಸಹಿಸುವಿರೇನು? ನಿಮ್ಮ ಜನ್ಮಕ್ಕೆ ಧಿಕ್ಕಾರವಿರಲಿ! ನಿಮ್ಮಂತಹ ಹೇಡಿಗಳೊಡನೆ ಮಾತಾಡುತ್ತ ಕುಳಿತುಕೊಳ್ಳಲು ನನಗವಕಾಶವಿಲ್ಲ.' ಎಂದು ಹೇಳಿ, ಎದ್ದು ಹೊರಡಲನುವಾದಳು.

"ನಾನು ಭಕ್ತಿಭಾವದಿಂದ ಕೈಜೋಡಿಸಿಕೊಂಡು, 'ದೇವಿ, ನನ್ನ ಮೇಲೆ ಕೋಪವೇಕೆ? ನಾನು ಹೀಗಿರುವುದು ನಿನ್ನ ಮನಸ್ಸಿಗೆ ಬಾರದೆ? ನನ್ನ ಹೃದಯಮಂದಿರದಲ್ಲಿ ನಿನ್ನ ಮೂರ್ತಿಯು ಅಚ್ಚಳಿಯದೆ ಇನ್ನೂ ಮೆರೆಯುವುದನ್ನಾದರೂ ನೋಡಬಾರದೆ? ದಯಮಾಡಿ ಹಿಂದಿರುಗು' ಎಂದು ಅಂಗಲಾಚಿ ಬೇಡಿಕೊಂಡೆ.

"ಅವಳು ಹಿಂದಿರುಗಿದಳು. ಅವಳ ಮುಖದಲ್ಲಿದ್ದ ತಿರಸ್ಕಾರ ಭಾವವು ಮಾಯವಾಗಿತ್ತು. ನನ್ನನ್ನು ದಯಾಪೂರ್ಣ ದೃಷ್ಟಿಯಿಂದ ನೋಡತೊಡಗಿದಳು. 'ಸೀತೆ, ನನ್ನ ಕರ್ತವ್ಯವೇನೆಂಬುದನ್ನರುಹು. ನೀನೆಂದಂತೆ ವರ್ತಿಸುವೆನು. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ' ನಾನು ದೈನ್ಯದಿಂದ ಕೇಳಿಕೊಂಡೆ.

"ಅವಳ ಮುಖವು ಪ್ರಫುಲ್ಲಿತವಾಯಿತು. ನನ್ನ ಪಕ್ಕದಲ್ಲಿ ಕುಳಿತುಕೊಂಡು, 'ಹಾಗಾದರೆ ಕೂಡಲೆ ಉಡುಪಿಗೆ ಹೋಗತಕ್ಕದ್ದು' ಎಂದು ಆಜ್ಞಾಪಿಸಲು ನಾನು ಒಪ್ಪಿದೆ. ನಾನು ಮದುವೆಯಾಗಿ ಸಂಸಾರಿಯಾಗಬೇಕೆಂದು ಅವಳು ಹೇಳಲು, ನಾನು, 'ಸೀತೆ, ಈ ಮಾತೊಂದನ್ನು ಮಾತ್ರ ಹೇಳಬೇಡ. ನಾನು ಊರಿಗೆ ಹೋಗುವೆನು. ಆದರೆ ಈ ಜನ್ಮದಲ್ಲಿ ನಾನು ಬೇರಾರನ್ನೂ ಪ್ರೀತಿಸಲಾರೆ' ಎಂದು ದೃಢವಾಗಿ ಹೇಳಿದೆ.

"ಅವಳು ಎದ್ದು ನಿಂತು, 'ಹಾಗಾದರೆ ನನಗೆ ಹೋಗಲು ಅನುಮತಿ ಕೊಡಿ. ನಿಮಗೆ ಗಳಿಗೆಗೊಂದು ಮಾತೆಂದು ನಾನೆಣಿಸಿರಲಿಲ್ಲ. ಈಗ ಹೇಳಿದಿರಿ—ನಾನು ಹೇಳಿದಂತೆ ನಡೆಯುವೆನೆಂದು. ನನ್ನ ಮನೋಭೀಷ್ಟ

ವನ್ನು ನಾನೊರೆದ ಕೂಡಲೆ ಕಾನೂನು ಮಾತಾಡಲು ಪ್ರಾರಂಭಿಸಿದಿರಿ' ಎಂದು ಹೇಳಿ ಒಂದೆರಡಡಿ ಮುಂದಿಟ್ಟಳು.

"ನಾನು ಅವಳನ್ನು ತಡೆದು ನಿಲ್ಲಿಸಿ, 'ಸೀತೆ, ಕೋಪಿಸಬೇಡ. ನಾನು ಪುನರ್ವಿವಾಹವಾದರೆ ನಿನಗೆ ಸಂತೋಷವೆ? 'ಎಂದು ಕೇಳಿದೆ.

"ಅದಕ್ಕವಳು, 'ತುಂಬಾ ಸಂತೋಷ. ಆದರೆ ಮದುವೆಯಾಗದೆ ಹೀಗೆಯೆ ಇದ್ದರೆ ಮಾತ್ರ ನನಗೆ ಬಹಳ ವ್ಯಥೆಯಾಗುವುದು' ಎಂದುತ್ತರ ವಿತ್ತಳು.

"ನಾನವಳಿಗೆ ವಚನವಿತ್ತೆ—'ಹಾಗಾದರೆ ನಿನಗೋಸುಗ ನಾನು ಪುನಃ ಮದುವೆಯಾಗುತ್ತೇನೆ.'

"ಅವಳು ಸಂತುಷ್ಟಳಾಗಿ, 'ನೀವು ಲೀಲೆಯನ್ನು ಮದುವೆಯಾಗ ಬೇಕೆಂದು ಹಿರಿಯರೆಲ್ಲರ ಅಭಿಪ್ರಾಯ' ಎಂದು ಹೇಳಿ, ಅಂತರ್ಧಾನ ಳಾದಳು.

"ಲೀಲೆ, ನಾನು ನಿನ್ನನ್ನು ವರಿಸಬೇಕೆಂದು ಸೀತೆಯ ಅಭಿಪ್ರಾಯ ವಿದ್ದಂತೆ ತೋರುತ್ತದೆ. ನಿನಗಿಷ್ಟವಿಲ್ಲವಾದರೆ ತಿಳಿಸು. ನನಗೆಳ್ಳಷ್ಟೂ ಬೇಸರವಿಲ್ಲ. ಸರ್ವವಿಧದಲ್ಲಿಯೂ ನೀನು ಸೀತೆಗೆ ಸರಿಸಾಟಿಯೆಂದು ನಾನು ಬಲ್ಲೆ. ನಿನ್ನನ್ನು ವರಿಸುವ ಯೋಗ್ಯತೆ ನನ್ನಲ್ಲಿಲ್ಲವೆಂಬುದನ್ನೂ ನಾನರಿತಿರುವೆ. ಆದರೂ ನನ್ನ ಮೇಲೆ ಕೃಪೆಯಿಟ್ಟು, ನನ್ನನ್ನು ಸ್ವೀಕರಿಸಿ, ಕೃತಾರ್ಥನನ್ನಾಗಿ ಮಾಡಬೇಕೆಂದು ಬೇಡಿಕೊಳ್ಳುತ್ತಿರುವೆನು."

ಬಾಗಿಲ ಮರೆಯಲ್ಲಿ ನಿಂತು ನೋಡುತಿದ್ದ ಕಾವೇರಮ್ಮನು ಅಲ್ಲಿಂದೆದ್ದು ಹೋದಳು.

ಅನಂತನು ಎದ್ದು ಕುಳಿತ. ಲೀಲೆಯು ಅವನ ವಕ್ಷಸ್ಥಲದಲ್ಲಿ ತನ್ನ ಮಸ್ತಕವನ್ನಿಟ್ಟು, "ನಿಮ್ಮನ್ನು ಮೊದಲ ಸಲ ನೋಡಿದಂದಿನಿಂದಲೂ ನಾನು

ನಿಮ್ಮನ್ನು ಪ್ರೀತಿಸುತ್ತಿರುವೆನು. ಆದರೆ ನನ್ನ ಪ್ರೇಮದ ಸಂಗತಿಯನ್ನು ಗೌಪ್ಯವಾಗಿಟ್ಟುಕೊಂಡಿದ್ದೆ. ನೀವು ಶ್ರೀಮಂತರು; ನಾನು ಬಡವೆ. ನಿಮ್ಮೊಂದಿಗೆ ನನ್ನ ವಿವಾಹವಾಗುವುದು ಸಾಧ್ಯವಿಲ್ಲವೆಂದು ನನಗೆ ತಿಳಿದಿತ್ತು. ನಾನು ಶ್ರೀಮಂತೆಯಾಗಿ ಏಕೆ ಹುಟ್ಟಲಿಲ್ಲವೆಂದು ಪ್ರಾರಬ್ಧವನ್ನು ದೂರುತಿದ್ದೆ. ಅಷ್ಟರಲ್ಲಿ, ನೀವು ಅಕ್ಕನನ್ನು ಪ್ರೀತಿಸುವಿರೆಂಬುದನ್ನು ಕೇಳಿದೆ. ಮೊದಲು ನನಗೆ ಸ್ವಲ್ಪ ವ್ಯಥೆಯಾದುದೇನೊ ನಿಜ. ಆದರೆ, ಕಷ್ಟದುಃಖಗಳನ್ನೆ ಬೇಡಿಕೊಂಡು ಬಂದ ನಮ್ಮಕ್ಕನು ಸುಖದ ದಿನಗಳನ್ನು ಕಾಣಲಿರುವಳೆಂದು ತಿಳಿದು ಸಂತೋಷಹೊಂದಿದೆ. ವಿಧವೆಯರು ಸುಖವನ್ನನುಭವಿಸುವುದು ದೇವರ ಮನಸ್ಸಿಗೂ ಸೇರಲಿಲ್ಲವೊ ಏನೊ! ಅಕ್ಕನು ಅಕಾಲಮೃತ್ಯುವಿಗೀಡಾದಳು.

"ನಿಮ್ಮನ್ನಿನ್ನು ಕಾಣುವೆನೊ ಇಲ್ಲವೊ ಎಂದು ತಿಳಿಯದೆ, ಬಿ. ಎ. ವರೆಗೆ ಕಲಿತು, ಎಲ್ಲಾದರೂ ಉಪಾಧ್ಯಾಯಿನಿಯ ಕೆಲಸವನ್ನು ನೋಡಿಕೊಂಡಿರಬೇಕೆಂದು ನಿಶ್ಚಯಿಸಿದೆ. ನನ್ನ ವಿದ್ಯಾಭಿಲಾಷೆಗೆ ಗೋಪಾಲರಾಯರು ಉತ್ತೇಜನಕೊಟ್ಟರು. ನಾನು ಇಷ್ಟವಿರುವಷ್ಟು ಕಲಿಯಬೇಕೆಂದೂ ಯಾವ ರೀತಿಯ ಸಹಾಯ ಮಾಡಲೂ ಸಿದ್ಧಸಿದ್ಧೇನೆಂದೂ ಅವರು ಭರವಸೆಯಿತ್ತರು. ನೀವು ಎಂದಾದರೂ ಹಿಂದಿರುಗಿ, ನನ್ನನ್ನು ವರಿಸಬಹುದೆಂದು ಒಮ್ಮೊಮ್ಮೆ ನನಗೆ ಆಶೋದಯವಾಗುತಿತ್ತು. ಆದರೆ ಆ ಆಶಾಲತೆಯನ್ನು ಅಲ್ಲೆ ಚಿವುಟಿ, ವಿದ್ಯಾರ್ಜನೆಯೆ ನನ್ನ ಈಗಿನ ಕರ್ತವ್ಯವೆಂದು ಭಾವಿಸಿ, ನಿಮ್ಮನ್ನು ಮರೆಯಲು ಯತ್ನಿಸುತಿದ್ದೆ. ನಾನು ಬಡಕುಟುಂಬದಲ್ಲಿ ಹುಟ್ಟಿದ್ದರೂ, ನನ್ನಲ್ಲಿ ಪ್ರೇಮಕ್ಕೆ ಬಡತನವಿಲ್ಲ! ಸರ್ವಕಾರ್ಯಗಳಲ್ಲಿಯೂ ನಿಮಗೆ ನೆರವಾಗಲು ಯತ್ನಿಸುವೆನು" ಎಂದು ಹೇಳುತ್ತ ಸೊಗದಾಲಿಸೀರನ್ನುದುರಿಸತೊಡಗಿದಳು.

---

# ಉಪಸಂಹಾರ

ಸೀತೆಯು ಗತಿಸಿ ನಾಲ್ಕು ವರ್ಷಗಳಾಗಿ ಹೋಗಿವೆ. ಅನಂತ ಲೀಲೆಯರು ದಂಪತಿಗಳಾಗಿ, ಸುಖಸಂಸಾರ ಸಾಗಿಸುತಿದ್ದಾರೆ. ಅನಂತನು ಬಹುಮಾನಪಟ್ಟ ಮದರಾಸು ಹೈಕೋರ್ಟಿನ ಎಡ್ವೊಕೇಟ್ ಆಗಿ ಉಡುಪಿಯಲ್ಲಿ ವಕಾಲತು ಪ್ರಾರಂಭಿಸಿರುವನು.

ಲೀಲೆಯು ಬಿ. ಎ. ಕಲಿಯಲು ಮದರಾಸಿಗೆ ಹೋಗಿದ್ದಳು. ಬಿ. ಎ. ಮುಗಿಸಬೇಕೆಂದು ಅವಳಿಗೆ ತುಂಬಾ ಆಶೆಯಿತ್ತು. ಆದರೆ, ಅಷ್ಟರಲ್ಲೆ, ಎಲ್ಲ ವಿಶ್ವವಿದ್ಯಾಲಯಗಳ ಎಲ್ಲ ಪದವಿಗಳಿಗಿಂತಲೂ ಮಹತ್ತಾದ ತಾಯ್ತನದ ಪದವಿಯು ಅವಳಿಗೆ ದೊರೆಯಿತು. ಮಗುವು ಮುದ್ದಿನ ಮುದ್ದೆಯಂತಿದೆ. 'ಸೀತೆ'ಯೆಂದೆ ನಾಮಕರಣ ಮಾಡಿದ್ದಾರೆ. ಸೀತೆಯೇ ತಮಗೆ ಮಗಳಾಗಿ ಹುಟ್ಟಿದಳೆಂದು ಆ ಸತಿಪತಿಗಳು ಭಾವಿಸುತ್ತಾರೆ.

ಗೋಪಾಲರಾಯರು ಎಂದಿನಂತೆ ಗೀತಾಧ್ಯಯನ ಮಾಡುತ್ತಿರುವರು. ಸಾಯಂಕಾಲ ಅವರು ತಿರುಗಾಡಲು ಹೋಗುವಾಗ ಪುಟ್ಟ ಸೀತೆಯೂ ಅವರೊಟ್ಟಿಗೆ ಹೋಗುತ್ತಿರುವಳು. ಎಂದಾದರೊಂದು ದಿನ ಗೋಪಾಲರಾಯರು ಸಾಯಂಕಾಲ ಹೊರಗೆ ಹೋಗದಿದ್ದರೆ, ಸೀತೆಯು ಅತ್ತು ರಂಬಾಟಮಾಡುವಳು. ಆಗ ಅನಂತನು, ಅಮ್ಮನ ತುಂಟತನವೆಲ್ಲಾ ಮಗುವಿಗೂ ಬಂದಿದೆಯೆಂದು ಟೀಕಿಸಿ, ಲೀಲೆಯ ಹುಸಿಮುನಿಸನ್ನು ಲಕ್ಷಿಸದೆ ಮಗುವನ್ನೆತ್ತಿಕೊಂಡು ಹೊರಗೆ ಹೋಗುವನು.

ಲೀಲೆಯು ಅತ್ತೆಗೆ ಅನುಕೂಲೆಯಾಗಿ ವರ್ತಿಸುವಳು. ಕಾವೇರಮ್ಮನೂ ಸೊಸೆಯನ್ನು ಮಗಳಂತೆ ಭಾವಿಸುತ್ತಿರುವಳು.

ಕಾವೇರಮ್ಮನಿಗೆ ಮೊಮ್ಮಗಳನ್ನೆತ್ತಿ ಮುದ್ದಾಡಿದಷ್ಟೂ ಸಾಲದು.

ಚಂದ್ರಭಾಗಮ್ಮನ ಜಪ—ತಪ—ನಿಷ್ಠೆ—ನಿಯಮಗಳು ದಿನದಿಂದ ದಿನಕ್ಕೆ ಹೆಚ್ಚಾಗತೊಡಗಿವೆ. ಈಗ ಅವಳು ಹೆಚ್ಚಿನ ಸಮಯವನ್ನು

ಭಗವದ್ಧ್ಯಾನದಲ್ಲಿ ಕಳೆಯುತ್ತಿರುವಳು. ಮಡಿಯಲ್ಲಿಲ್ಲದಿದ್ದಾಗ, ಎಲ್ಲಾದ ರೊಮ್ಮೆ ಮೊಮ್ಮಗಳನ್ನೆತ್ತಿಕೊಳ್ಳುವಳು. ಕಾವೇರಮ್ಮನನ್ನು ಕಂಡರೆ ಕುಣಿ ಯುವ ಸೀತೆಯು, ಚಂದ್ರಭಾಗಮ್ಮನನ್ನು ನೋಡಿದರೆ ಅಂಜುವಳು. ಚಂದ್ರ ಭಾಗಮ್ಮನೂ ಮಿಥ್ಯಾಸಂಸಾರದ ಆಶಾಪಾಶಗಳಿಂದ ಆದಷ್ಟು ದೂರ ವಾಗಿರಬಯಸುವಳು.

ಗೋವಿಂದ ಮಾಸ್ಟರರು ಸುಧಾರಿತ ಮನೋವೃತ್ತಿಯವರು. ಸಮಾಜದಲ್ಲಿ ಅಂಟಿಕೊಂಡಿರುವ ದುಷ್ಟಚಾಳಿಗಳನ್ನಟ್ಟಬೇಕೆಂದು ಟೊಂಕ ಕಟ್ಟಿದವರಲ್ಲಿ ಅವರೊಬ್ಬರು. ವಿಧವಾವಿವಾಹವನ್ನು ಪ್ರಚಾರಕ್ಕೆ ತರ ಬೇಕೆಂದಿದ್ದ ಅವರು ವಿಧವೆಯಾದ ಸೀತೆಯಲ್ಲಿ ಅನುರಕ್ತರಾಗಿ ಕಾರ್ಯ ಸಿದ್ಧಿಗೋಸುಗ ಹೆಣಗಬೇಕೆಂದಿದ್ದರು. ಆದರೆ ತನಗಿಂತ ಯೋಗ್ಯನಾದ ಅನಂತನು ಸೀತೆಯನ್ನು ಪ್ರೀತಿಸುವನೆಂದೂ ಸೀತೆಯೂ ಅವನಲ್ಲಿ ಅನು ರಕ್ತೆಯಾಗಿರುವಳೆಂದೂ ತಿಳಿದಂದಿನಿಂದ ಸೀತೆಯನ್ನು ಸಹೋದರಿಯಂತೆ ಕಾಣತೊಡಗಿದ್ದರು. ಸೀತೆಗೆ ಕ್ಷಯರೋಗ ತಗಲಿದೆಯೆಂದು ಡಾಕ್ಟರರು ತಿಳಿಸಿದಾಗ, ಆಕೆಯನ್ನು ಮದರಾಸಿಗೆ ಕರೆದುಕೊಂಡು ಹೋಗಿ, ಚಿಕಿತ್ಸೆ ನಡೆಸಬೇಕೆಂಬುದಾಗಿ ಅವರು ಚಂದ್ರಭಾಗಮ್ಮನಿಗೆ ಎಷ್ಟೊ ಹೇಳಿ ನೋಡಿದ್ದರು. ಅನಂತನು ಬಂದು ಸೀತೆಯನ್ನು ಮದರಾಸಿಗೆ ಕರೆದು ಕೊಂಡು ಹೋದಾಗ ಮಾಸ್ಟರರಿಗೆ ಬಹಳ ಸಂತೋಷವಾಗಿತ್ತು. ಸೀತೆಯು ಬದುಕಬಹುದೆಂಬ ಆಶೆಯೂ ಅವರಲ್ಲಿ ಉತ್ಪನ್ನವಾಗಿತ್ತು. ತಾನು ಶ್ರೀಮಂತನಲ್ಲದಿದ್ದುದರಿಂದ ಸೀತೆಗೆ ಹೆಚ್ಚಿನ ಸೇವೆ ಸಲ್ಲಿಸಲು ಆಗದುದ ಕ್ಕಾಗಿ ಅವರು ಬಹಳ ವಿಷಾದಗೊಂಡಿದ್ದರು.

ಸೀತೆಯ ಮರಣದ ವೃತ್ತಾಂತವನ್ನು ಕೇಳಿದಾಗ, ಕೆಲವು ದಿನಗಳ ವರೆಗೆ ಮಾಸ್ಟರರು ಮಂಕರಂತಿದ್ದರು. ಆದರೆ ಅವರು ಶೀಘ್ರದಲ್ಲೆ ಎಲ್ಲ ದುಃಖವನ್ನೂ ಮರೆತು, ಆಜೀವಬ್ರಹ್ಮಚಾರಿಯಾಗಿ ಸಮಾಜಸೇವೆ, ಸಮಾಜಸುಧಾರಣೆಗಳಲ್ಲಿ ಶೇಷಾಯುಷ್ಯವನ್ನು ಕಳೆಯಬೇಕೆಂದು ನಿರ್ಧರಿಸಿ ದರು.

ಸೀತೆಯನ್ನು ಎಲ್ಲರೂ ಮರೆಯಬಹುದು. ಆದರೆ ಇಬ್ಬರು ಮಾತ್ರ ಅವಳನ್ನೆಂದಿಗೂ ಮರೆಯುವಂತಿಲ್ಲ; ಈ ಇಬ್ಬರು ಅವಳ ಭಾವಚಿತ್ರ ವನ್ನು ನಿತ್ಯವೂ ಪೂಜಿಸುತ್ತಿರುವರು. ಇವರಲ್ಲೊಬ್ಬನು ಅನಂತ; ಮತ್ತೊಬ್ಬರು ಯಾರೆಂದರೆ—ಗೋವಿಂದ ಮಾಸ್ತರರು!

**ಸಂಪೂರ್ಣಂ**

